# ನಮ್ಮ ಮಾನಸ

ಸಂಪುಟ : 4 ಏಪ್ರಿಲ್ 2011 ಸಂಚಿಕೆ : 12

ನೆನ್ನೆ ನೆತ್ತಿ ಮೇಲೆ
ನಾಳೆ ಬೆನ್ನ ಮೇಲೆ
ಒಂದು ಭಾರಿ ತೂಕ
ಇನ್ನೊಂದು ಬರೀ ಪುಳಕ
ನಡುವಿಗೆ ದಾರಿ ಕಳೆವುದೆ ತವಕ

# ಮಲೇರಿಯಾ ನಿಯಂತ್ರಣದಲ್ಲಿ ಸಮುದಾಯದ ಸಹಭಾಗಿತ್ವ

## ಮಲೇರಿಯಾ ರೋಗವು ಹರಡದಂತೆ ಈ ಕೆಳಕಂಡ ಕ್ರಮಗಳನ್ನು ಅನುಸರಿಸಿ

- ಯಾವುದೇ ಜ್ವರ ಮಲೇರಿಯಾ ಇರಬಹುದು, ಆದಷ್ಟು ಶೀಘ್ರವಾಗಿ ರಕ್ತ ಪರೀಕ್ಷೆ ಮಾಡಿಸಿ ಕ್ಲೋರೋಕ್ವಿನ್ ಗುಳಿಗೆಗಳನ್ನು ತೆಗೆದುಕೊಳ್ಳಿ.
- ಮಲೇರಿಯಾ ಎಂದು ರಕ್ತ ಪರೀಕ್ಷೆಯಲ್ಲಿ ಖಚಿತಪಟ್ಟಲ್ಲಿ ತಪ್ಪದೇ ತೀವ್ರ ಚಿಕಿತ್ಸೆ ಪಡೆಯಿರಿ. ಈ ಚಿಕಿತ್ಸೆಯ ವಿವರಗಳು ಹಾಗೂ ಗುಳಿಗೆಗಳು ಆರೋಗ್ಯ ಕಾರ್ಯಕರ್ತರಲ್ಲಿ ಹಾಗೂ ಎಲ್ಲಾ ಸರ್ಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಉಚಿತವಾಗಿ ದೊರಕುತ್ತವೆ.
- ಶಿಶುಗಳು ಮತ್ತು ಗರ್ಭಿಣಿಯರಿಗೆ ಮಲೇರಿಯ ರೋಗವು ಆತಂಕಕಾರಿಯಾಗಿದ್ದು, ಅಂತಹವರು ಯಾವುದೇ ಜ್ವರವಿರಲಿ, ತಡಮಾಡದೇ ವೈದ್ಯರ ಸಲಹೆ ಪಡೆಯುವುದು.
- ನೀರು ಶೇಖರಣಾ ತೊಟ್ಟಿಗಳನ್ನು ಭದ್ರವಾದ ಮುಚ್ಚಳದಿಂದ ಯಾವಾಗಲೂ ಮುಚ್ಚಿರಬೇಕು. ವಾರಕ್ಕೊಮ್ಮೆ ನೀರನ್ನು ಸಂಪೂರ್ಣವಾಗಿ ಖಾಲಿ ಮಾಡಿ, ಒಣಗಿಸಿ ಮತ್ತೆ ಭರ್ತಿ ಮಾಡಿಕೊಂಡಲ್ಲಿ ಇಂತಹ ನೀರು ಶೇಖರಣೆಗಳಲ್ಲಿ ರೋಗವಾಹಕ ಸೊಳ್ಳೆಗಳ ಉತ್ಪತ್ತಿಯನ್ನು ತಡೆಗಟ್ಟಬಹುದು.
- ಆರೋಗ್ಯ ಇಲಾಖೆಯು ಕೈಗೊಳ್ಳುವ ಕೀಟನಾಶಕ ಸಿಂಪಡಣಾ ಕಾರ್ಯಕ್ಕೆ ಸಂಪೂರ್ಣ ಸಹಕಾರ ನೀಡಿ.
- ಸದಾ ನೀರಿರುವ ಕೆರೆ, ಕುಂಟೆ, ಬಾವಿ, ತೋಟದ ಕಾರಂಜಿಗಳು ಮುಂತಾದ ತಾಣಗಳಲ್ಲಿ ಸೊಳ್ಳೆಯ ಮರಿಗಳನ್ನು ತಿನ್ನುವ ಗ್ಯಾಂಬೂಸಿಯ ಮತ್ತು ಗಪ್ಪಿ ಎಂಬ ಸಣ್ಣ ಸಣ್ಣ ಮೀನುಗಳನ್ನು ಬಿಡುವುದು.
- ಮನೆಯ ಕಿಟಕಿ ಬಾಗಿಲುಗಳಿಗೆ ಕೀಟ ತಡೆಗಟ್ಟುವ ಜಾಲರಿಗಳನ್ನು ಅಳವಡಿಸಿಕೊಳ್ಳಿ.
- ಮಲಗುವಾಗ ತಪ್ಪದೇ ಸೊಳ್ಳೆ ಪರದೆಯನ್ನು ಉಪಯೋಗಿಸಿ.
- ಸಂಜೆವೇಳೆ ಬೇವಿನ ಹೊಗೆ ಹಾಕುವುದು, ಸಾಮ್ರಾಣಿ ಧೂಪ ಹಾಕುವುದು ಹಾಗೂ ರಾತ್ರಿವೇಳೆ ಇತರ ಸೊಳ್ಳೆ ನಿರೋಧಕ ವಿಧಾನಗಳನ್ನು ಬಳಸಿ ಸೊಳ್ಳೆ ಕಡಿತದಿಂದ ದೂರವಿರಿ.
- ಹರಿಯದೇ ನಿಂತ ನೀರು–ಸೊಳ್ಳೆ ಉತ್ಪತ್ತಿಯ ತವರು. ಮನೆಯ ಸುತ್ತ ಮುತ್ತ ನೀರು ನಿಲ್ಲದಂತೆ ಎಚ್ಚರ ವಹಿಸಿ ಸೊಳ್ಳೆಗಳ ಉತ್ಪತ್ತಿಯನ್ನು ತಡೆಗಟ್ಟಿರಿ.

**ಶೀಘ್ರಪತ್ತೆ – ತ್ವರಿತ ಚಿಕಿತ್ಸೆಯಿಂದ**
**ಸಾವು ನೋವುಗಳನ್ನು ತಡೆಗಟ್ಟಲು ಖಂಡಿತ ಸಾಧ್ಯ.**


ಕರ್ನಾಟಕ ವಾರ್ತೆ

# ನಮ್ಮ ಮಾನಸ

ಏಪ್ರಿಲ್ 2011

ಸಂಪುಟ : 4    ಸಂಚಿಕೆ : 12



*Editor, Printer and Publisher*
**Rajeshwari H.S.,**
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*



*Printed at*
**ILA Mudrana**
*No. 36, 40 Ft. Road, Raghavanagara,*
*New Timberyard Layout*
*Bangalore-26.*
*©: 26757159*





*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

**ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ**

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**




ಸಂಪಾದಕೀಯ

# ಯಾರು ಸ್ತ್ರೀವಾದಿಯಲ್ಲ?!

ಸಬಲೀಕರಣದ ಚರ್ಚೆ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಕೇಳಿಬರುತ್ತಿದೆ. ವಿಶೇಷವಾಗಿ ಹೆಣ್ಣಿನ ಸಬಲೀಕರಣದ ಬಗ್ಗೆ ಸರ್ಕಾರಿ ಕಾರ್ಯಕ್ರಮಗಳಿಂದ ಹಿಡಿದು ಖಾಸಗಿ ಉದ್ಯಮಗಳಲ್ಲಿಯೂ ಚರ್ಚಿಸಲಾಗುತ್ತಿದೆ. ನಿಜಾರ್ಥದಲ್ಲಿ ಸಬಲೀಕರಣ ಎಂಬುದು ಬಲಾ-ಬಲಗಳ ಪ್ರಶ್ನೆಯಲ್ಲ, ಹೆಣ್ಣು ಗಂಡಾಗಬೇಕೆಂಬುದಲ್ಲ, ಗಂಡು ಹೆಣ್ಣಾಗಬೇಕೆಂಬುದೂ ಅಲ್ಲ. ಅಂತರಂಗದ ಪರಿವೀಕ್ಷಣೆಯಲ್ಲಿ ಗಂಡು–ಹೆಣ್ಣನ್ನೊಳಗೊಂಡ, ಹೆಣ್ಣು ಗಂಡನ್ನೊಳಗೊಂಡ ಜೀವಿಯಷ್ಟೆ.

ಅಧಿಕಾರ ಎನ್ನುವುದು ವ್ಯಕ್ತಿಗತ ಸಾಧನೆಯಲ್ಲ; ಸ್ಪರ್ಧೆಗಾಗಿ, ಲಾಭಕ್ಕಾಗಿ ಅಧಿಕಾರವಲ್ಲ. ಇಂತಹ ಅಧಿಕಾರದ ಕಲ್ಪನೆ ಅನಾಹುತ ಅಷ್ಟೇ ಅಲ್ಲ, ದುರಂತ ಕೂಡಾ ಆಗಿರುತ್ತದೆ. ಅಧಿಕಾರದ ನಿರ್ವಚನೆ ಅರ್ಥಪೂರ್ಣವಾಗಿರಬೇಕು. ಸಮಾಜದ ಆಶಯ, ಕಳಕಳಿ ಹೊಂದಿರದ ಅಧಿಕಾರವಾಗಲೀ ಸಮುದಾಯ, ನಿಸ್ವಾರ್ಥ, ಅಂತಃಕರಣ, ಸಮಾಜಮುಖಿಯಾಗಿರದ ಸಬಲೀಕರಣವಾಗಲೀ ವ್ಯಕ್ತಿಗತ, ಬಂಡವಾಳಶಾಹಿ ಹಾಗೂ ಮಾರುಕಟ್ಟೆಯ ಕಲ್ಪನೆಯಾಗಿರುತ್ತವೆ ಅಷ್ಟೇ. ಸಾಮೂಹಿಕ ನಾಯಕತ್ವ, ಸಾಮೂಹಿಕ ಅಧಿಕಾರದ ಕಲ್ಪನೆ ಮಾತ್ರ ಸಬಲೀಕರಣದ ಅರ್ಥ ವಿಸ್ತರಣೆ ಹೆಚ್ಚಿಸಬಹುದಾಗಿದೆ.

ಹೆಣ್ಣಿನ ಸಬಲೀಕರಣದ ಚರ್ಚೆ ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಮಾರ್ದನಿಗೊಳ್ಳುತ್ತಿದೆ ಎಂದರೆ ಇದಕ್ಕೆ ಮುಖ್ಯ ಕಾರಣ ಮಹಿಳಾ ಚಳವಳಿ. 70ರ ದಶಕದ ಮಹಿಳಾ ಚಳವಳಿ ಕೋಮುವಾದದಿಂದ ಹಿಡಿದು ಕೌಟುಂಬಿಕ ಸಂಘರ್ಷಗವರೆಗೆ ಹೋರಾಟ ನಡೆಸಿದೆ. ಹೋರಾಟದ ಹಾದಿಯಲ್ಲಿ ಜಾತಿ, ವರ್ಗ, ಲಿಂಗ ಅಸಮಾನತೆಯ ಅಂಶಗಳನ್ನು ವಿಶ್ಲೇಷಿಸುತ್ತಲೇ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದೆ. ಯುದ್ಧ, ಅಣುಶಕ್ತಿಯಂತಹ ಸಮಸ್ಯೆಗಳನ್ನೂ ಕೈಗೆತ್ತಿಕೊಂಡು ಹೋರಾಟ ನಡೆಸಿದೆ. ಮಹಿಳಾ ಚಳವಳಿಯು ಮಹಿಳಾಶಕ್ತಿ, ಮಹಿಳಾ ಸಬಲೀಕರಣವು ಸಮಾಜದ ಪಲ್ಲಟನೆಗೆ, ಹೊಸ ಸಮಾಜದ ಸೃಷ್ಟಿಗೆ, ಮಾನವೀಯ ಮೌಲ್ಯಗಳ ದಾರ್ಶನಿಕತೆಗೆ ಎಡೆಮಾಡಿಕೊಡಬಹುದೆಂಬ ಕನಸನ್ನು ಒಡಲಲ್ಲಿ ಹೊತ್ತುಕೊಂಡು ಸಾಮೂಹಿಕ ನಿರ್ಧಾರ, ಸಾಮೂಹಿಕ ಅಧಿಕಾರದ ಅಗತ್ಯವನ್ನು ಹೇಳುತ್ತಲೇ ಬಂದಿದೆ. ಸಂಘಟನೆಗಳಲ್ಲಿ ಕೂಡಾ ಶ್ರೇಣೀಕೃತ ಅಧಿಕಾರ ಇರಬಾರದೆಂದು ವಾದಿಸುತ್ತಾ, ಸಂಘಟಿತ ನಾಯಕತ್ವದ ಹಿನ್ನೆಲೆಯಲ್ಲಿಯೇ ಸ್ವಾಯತ್ತ ಮಹಿಳಾಚಳವಳಿಗಳನ್ನು ರೂಪಿಸುತ್ತಾ, ಭಿನ್ನವಾದ 'ಮಹಿಳಾ ಮಾದರಿ'ಯನ್ನು ಎತ್ತಿ ಹಿಡಿದಿದೆ. ಮಹಿಳೆಯರ ಲೋಕ ಇಂದು ವಿಸ್ತಾರಗೊಂಡಿದೆ. ಕಾನೂನುಗಳು ಮಹಿಳೆಯರ ಪರವಾಗಿವೆ. ಕೌಟುಂಬಿಕ ದೌರ್ಜನ್ಯ ನಿರ್ಲಕ್ಷಿಸುವಂತಿಲ್ಲ. ಮೀಸಲಾತಿ ಕೊಡದೇ ಇರಲಿಕ್ಕಾಗುವುದಿಲ್ಲ. ಔದ್ಯೋಗಿಕ ಕ್ಷೇತ್ರದಲ್ಲಿ ಆಕೆಯ ಶ್ರಮ ಅಗತ್ಯವಾಗಿರುವುದರಿಂದ ಆಕೆಯನ್ನು ಕಡೆಗಣಿಸುವಂತಿಲ್ಲ. ಕೃಷಿಯ ದುಡಿಮೆಯಲ್ಲಿ ಮಹಿಳೆಯರ ಶ್ರಮ ಅಧಿಕವಾಗಿದೆ ಎನ್ನುವ ಒತ್ತಡವನ್ನು ಮಹಿಳಾ ಚಳವಳಿ ಪ್ರಭುತ್ವದ ಮೇಲೆ ಹೇರಿರುವುದರಿಂದ ಇಂದು ಹೆಣ್ಣು ಮಕ್ಕಳ ಶಕ್ತಿಗೆ, ಶ್ರಮಕ್ಕೆ ಬೆಲೆ ಕೊಡಲೇಬೇಕಾದ ಅನಿವಾರ್ಯತೆಯನ್ನು ಪ್ರಭುತ್ವಗಳು ಹಾಗೂ ಬಂಡವಾಳಶಾಹಿ ಮಾರುಕಟ್ಟೆಗಳು ಎದುರಿಸುತ್ತಿವೆ.

ಈ ಅನಿವಾರ್ಯತೆಯನ್ನು 'ಮಹಿಳಾ ಸಬಲೀಕರಣ' ಎಂಬ ಭಾಷೆಯಲ್ಲಿ ಪ್ರಭುತ್ವ ಹಾಗೂ ಬಂಡವಾಳಶಾಹಿ ಮಾರುಕಟ್ಟೆಗಳು ಒಪ್ಪಿಕೊಂಡಿವೆ. ಹಾಗೆ ಒಪ್ಪಿಕೊಂಡು ಜಾರಿಗೆ ತರುವ ಕಾರ್ಯಕ್ರಮಗಳಲ್ಲಿ ಪಿತೃಭಾಷೆ, ಪಿತೃಸಂಸ್ಕೃತಿ ಹಾಗೂ ಮಾರುಕಟ್ಟೆಯ ಕಲ್ಪನೆಯನ್ನು ಒಡಗೂಡಿಸಿ 'ಸಬಲೀಕರಣ'ಕ್ಕೆ ತಮ್ಮದೇ ವ್ಯಾಖ್ಯಾನ ನೀಡುತ್ತಿವೆ, ಹಾಗೂ ತಮ್ಮದೇ ಆದ 'ಮಹಿಳಾ ಮಾದರಿ'ಗಳನ್ನು ಸೃಷ್ಟಿಸುತ್ತಿವೆ. ಮಹಿಳಾ ಶಕ್ತಿಯನ್ನು ಮಹಿಳಾ ಚಳವಳಿ ನಿರ್ವಹಿಸಿದ ರೀತಿಗೂ, ಪ್ರಭುತ್ವಗಳು ಹಾಗೂ ಬಂಡವಾಳಶಾಹಿ ಮಾರುಕಟ್ಟೆ ನಿರ್ವಹಿಸುತ್ತಿರುವ ಭಾಷೆಯ ಸ್ವರೂಪ, ಕಾರ್ಯಕ್ರಮದ ಸ್ವರೂಪ, ಕಳಕಳಿಯ ಸ್ವರೂಪದಲ್ಲಿರುವ ಮೂಲಭೂತ ವ್ಯತ್ಯಾಸಗಳನ್ನು ಪ್ರತ್ಯೇಕಿಸಿ ನೋಡಬೇಕು ಮತ್ತು ಜಾಗತೀಕರಣದ ಮಾರುಕಟ್ಟೆಯಲ್ಲಿ ಇಂದು ಸೃಷ್ಟಿಯಾಗಿರುವ ಸಬಲೀಕರಣದ 'ಮಹಿಳಾ ಮಾದರಿ'ಯ ವಿಶ್ಲೇಷಣೆಯ ಜೊತೆಗೆ ಅವುಗಳನ್ನು ಎದುರಿಸುವ ಸವಾಲೂ ಕೂಡಾ ನಮ್ಮ ಮುಂದಿದೆ.

ಮೀಸಲಾತಿ ಅವಕಾಶ ಪಡೆದ ಗ್ರಾಮ, ಜಿಲ್ಲೆ, ರಾಜ್ಯಮಟ್ಟದ ಮಹಿಳಾ ಅಭ್ಯರ್ಥಿಗಳು ಪುರುಷ ರಾಜಕಾರಣವನ್ನೇ ಮುಂದುವರಿಸಿಕೊಂಡು ಹೋಗುತ್ತಾರೆ. ಜಾತಿ, ವರ್ಗದ ಪ್ರಶ್ನೆಯನ್ನು ಕೈಗೆತ್ತಿಕೊಳ್ಳದೇ ಪಕ್ಷದ, ಕುಟುಂಬದ, ಗಂಡ–ಅಣ್ಣ–ಅಪ್ಪಂದಿರ ವಕ್ತಾರರಾಗಿಬಿಡುತ್ತಾರೆ. ಇಂತಹ ಸಬಲೀಕರಣ, ಮಹಿಳಾಶಕ್ತಿ ಸಮಾಜದ ಸ್ವರೂಪವನ್ನು ಬದಲಾಯಿಸುತ್ತದೆಯೇ? ಅವಕಾಶಗಳನ್ನು ಬಳಸಿಕೊಂಡು ರಾಜಕಾರಣಕ್ಕೆ ಬರುವ ಹೆಣ್ಣುಮಕ್ಕಳು ರಾಜಕಾರಣದ ಹೊಸ ಭಾಷ್ಯ ಬರೆಯುವಲ್ಲಿ ವಿಫಲವಾದರೆ ಇಂತಹ ಸಬಲೀಕರಣ ಏನು ಅರ್ಥ, ಏನು ಯಶಸ್ಸು ಪಡೆಯುತ್ತದೆ?

ಪಕ್ಷಗಳ ಒಳಗೆ ಕಾರ್ಯಕರ್ತರಾಗಿ ದುಡಿಯುವ ಮಟ್ಟಿಗೆ ಸಬಲೀಕರಣಗೊಂಡ ಮಹಿಳೆಯರು ಗುಜರಾತ್‌ನಲ್ಲಿ ಒಂದು ಕೋಮಿನ ಮಹಿಳೆಯರ ಮೇಲೆ ನಡೆದ ಹಿಂಸೆಯಲ್ಲಿ ಕ್ರಿಯಾಶೀಲರಾಗಿ ಪಾತ್ರವಹಿಸಿದ್ದು ಸಬಲೀಕರಣದ ವೈರುಧ್ಯಗಳನ್ನು ಪ್ರತಿಧ್ವನಿಸುತ್ತದೆ. ಹೀಗೆ ಕೋಮುವಾದಿ ಸಂಘಟನೆಗಳು ಮಹಿಳಾ ಸಬಲೀಕರಣವನ್ನು ಕೋಮು ದಳ್ಳುರಿಯಲ್ಲಿ ಮತ್ತೊಂದು ಕೋಮಿನ ಹೆಣ್ಣಿನ ಮೇಲಿನ ಹಿಂಸೆಗೆ ಬಳಸಿಕೊಳ್ಳುತ್ತಿವೆ. ಜೊತೆಗೆ ಮೂಲಭೂತವಾದದ 'ಸಂಸ್ಕೃತಿ'ಯನ್ನು ಉಳಿಸಿ, ಬೆಳೆಸಲು ಮಹಿಳೆಯರು ಸಬಲೀಕರಣಗೊಳ್ಳುವ ಅಗತ್ಯವನ್ನು ಎತ್ತಿ ಹಿಡಿಯುತ್ತಿವೆ. ಇಂತಹ ಮಹಿಳಾ ಸಬಲೀಕರಣ ಹಾಗೂ ಇವರು ನೀಡುವ ಮಹಿಳಾ ಮಾದರಿಗಳನ್ನು ಸಹ ಮಹಿಳಾ ಚಳವಳಿ ವಿರೋಧಿಸುತ್ತದೆ.

ಸಬಲೀಕರಣದ ಹಿಂದೆ ಕೆಲಸ ಮಾಡುವ ಪಿತೃಸಂಸ್ಕೃತಿಯನ್ನು ಸಹ ವಿಶ್ಲೇಷಿಸಬೇಕಾಗುತ್ತದೆ. 'ಸ್ತ್ರೀ ಶಕ್ತಿ' ಸಂಘಟನೆಗಳಿಂದ ಗ್ರಾಮಾಂತರ ಮಹಿಳೆಯರು ಹೊರಗಿನ ಪ್ರಪಂಚಕ್ಕೆ ತೆರೆದುಕೊಂಡಿದ್ದಾರೆ ನಿಜ. ಕೆಲವು ಮಹಿಳೆಯರು ರಾಜಕಾರಣದ ಮೆಟ್ಟಿಲು ತುಳಿಯುವಷ್ಟು ಸಮರ್ಥವಾಗಿ ಬೆಳೆದಿದ್ದಾರೆ. ಆದರೆ ಜಾಗತೀಕರಣದ ಸಂದರ್ಭದಲ್ಲಿ ಮೇಲುಗೈ ಸಾಧಿಸುತ್ತಿರುವ ಕೋಮುವಾದ, ಜಾತೀಯತೆಯ ನೆಲೆಯನ್ನು ಇವರು ಪ್ರಶ್ನಿಸುತ್ತಾರೆಯೇ? ಹೆಣ್ಣಿನ ಹಕ್ಕೊತ್ತಾಯದ ಹೋರಾಟಗಳು ಇವರಿಂದ ನಡೆಯುತ್ತಿವೆಯೇ?

ಮಹಿಳಾ ಸಬಲತೆಯ ವಿವಿಧ ಮಾದರಿಗಳನ್ನು ಮಾರುಕಟ್ಟೆಯ ಒತ್ತಡಗಳು ನಮ್ಮ ಮುಂದೆ ಇಡುತ್ತಿವೆ. ಮಾರುಕಟ್ಟೆ ರೂಪಿಸಿರುವ ರಾಚನಿಕ ಹಿಂಸೆಯು ಈ ಹೊಸ ಮಾದರಿಯ ಮಹಿಳಾ ಸಬಲತೆಯಲ್ಲಿ ಅಡಗಿದೆ. ಸ್ಪರ್ಧೆ, ಅಧಿಕಾರ, ವ್ಯಕ್ತಿಗತ ಚಿಂತನೆ ಇವು ಮುಖ್ಯ ವಾಹಿನಿಯಲ್ಲಿ ಮಾರುಕಟ್ಟೆ ರೂಪಿಸುತ್ತಿರುವ ಮಹಿಳಾ ಸಬಲತೆಯ ಮಾದರಿಗಳು. ಐ.ಟಿ., ಬಿ.ಟಿ. ಕ್ಷೇತ್ರದಲ್ಲಿರುವ ವೈಯಕ್ತಿಕ ಸಾಧನೆಯ ಮಾದರಿಯನ್ನು ಮಹಿಳೆಯರ ಸಬಲತೆಯ ಮಾದರಿಯನ್ನಾಗಿ ಪ್ರತಿಬಿಂಬಿಸಲಾಗುತ್ತಿದೆ. ಇಂತಹ ಮಹಿಳಾ ಮಾದರಿಯ ಸಬಲೀಕರಣದಲ್ಲಿ ಸಮುದಾಯದ ಕನಸಿಲ್ಲ, ಸಮಾಜಮುಖಿ ಚಿಂತನೆಗಳಿಲ್ಲ, ಹಂಚಿಕೊಳ್ಳುವ ಕಲ್ಪನೆಯಂತೂ ಇಲ್ಲವೇ ಇಲ್ಲ.

ಮಹಿಳಾ ಚಳವಳಿಯ ಕಾರಣದಿಂದಾಗಿ ಇಂದು ಅನೇಕ ವಿಶ್ವವಿದ್ಯಾನಿಲಯಗಳಲ್ಲಿ 'ಮಹಿಳಾ ಅಧ್ಯಯನ' ಒಂದು ಭಾಗವಾಗಿ ರೂಪುಗೊಂಡಿದೆ. ಕ್ರಿಯಾಶೀಲರಾಗದೇ ಅಕ್ಯಾಡಮಿಕ್ ಶಿಸ್ತಿನಲ್ಲಿ ಮಹಿಳಾ ಸಮಸ್ಯೆಗಳನ್ನು ಕಲಿಸಲಾಗುತ್ತಿದೆ. ಇಂತಹ ಅಧ್ಯಯನಶೀಲ ಮಹಿಳೆಯರು ಹಾಗೂ ನಮ್ಮ ಅನೇಕ ಲೇಖಕಿಯರೂ ಕೂಡಾ 'ಮಹಿಳಾ ಮಾದರಿ'ಯ ಟ್ರ್ಯಾಪ್‌ಗೆ ಬೀಳುತ್ತಿದ್ದಾರೆ. "ನಾನು ಸ್ತ್ರೀ ಸಮಸ್ಯೆಗಳ ಬಗ್ಗೆ ಬರೆಯುತ್ತೇನೆ, ಮಾತನಾಡುತ್ತೇನೆ ಆದರೆ ನಾನು ಸ್ತ್ರೀವಾದಿಯಲ್ಲ" ಎನ್ನುತ್ತಾರೆ. ಮಹಿಳಾ ಹೋರಾಟ, ಮಹಿಳಾ ಚಳವಳಿಯಿಂದಾಗಿ ದೊರೆತ ಸವಲತ್ತುಗಳನ್ನು ಹಿಂಜರಿಕೆಯಿಲ್ಲದೇ ಬಳಸುವ ಇವರು ಚಳವಳಿ ನಿರ್ವಹಿಸಿದ ಸಮಸ್ಯೆಗಳ ಮೇಲೇ ಬೆಳಕು ಚೆಲ್ಲುತ್ತಿರುತ್ತಾರೆ. ಅವುಗಳನ್ನೇ ಕುರಿತು ಮಾತನಾಡುತ್ತಿರುತ್ತಾರೆ. ಲಿಂಗ ಅಸಮಾನತೆಯ ನೆಲೆಯನ್ನು ಪ್ರಶ್ನಿಸುತ್ತಿರುತ್ತಾರೆ. ಇವರು 'ನನ್ನ ಚಿಂತನೆ ವಿಶ್ವಪರವಾದದ್ದು,' 'ನನ್ನ ಕಾಳಜಿ ವಿಶ್ವಪರ ಕಾಳಜಿ' ಎನ್ನುವ ಮೂಲಕ ಸ್ತ್ರೀವಾದೀ ದೃಷ್ಟಿಕೋನವನ್ನು ಸಂಕುಚಿತವಾದುದು ಎಂದು ಅರ್ಥೈಸುತ್ತಿರುತ್ತಾರೆ. ಹಾಗೆಯೇ ಮುಖ್ಯ ವಾಹಿನಿ ಎಂದು ತಾವು ಗುರುತಿಸುವ ಸಾಹಿತ್ಯ-ಸಂಸ್ಕೃತಿಯಿಂದ ತಾವೆಲ್ಲಿ ಬೇರೆಯಾಗಿ ಬಿಡುತ್ತೇವೆಯೋ ಎಂಬ ಆತಂಕದಲ್ಲಿ 'ನಾನು ಸ್ತ್ರೀವಾದಿಯಲ್ಲ' ಎಂದು ಆಗಾಗ್ಗೆ ಸ್ಪಷ್ಟಪಡಿಸುತ್ತಿರುತ್ತಾರೆ. ಇಂತಹ 'ಮಹಿಳಾ ಮಾದರಿ'ಗಳ ವಿಶ್ಲೇಷಣೆ ಆಗಬೇಕಾಗಿದೆ.

ಒಟ್ಟಾಗಿ ಮೀಸಲಾತಿ, ಇತರ ಅವಕಾಶಗಳು ಹಾಗೂ ಮಹಿಳಾ ಹೋರಾಟದ ಸವಲತ್ತುಗಳನ್ನು ಬಳಸಿಕೊಂಡ ಮಹಿಳಾ ಸಮುದಾಯ ಬಂಡವಾಳಶಾಹಿ ಮಾರುಕಟ್ಟೆಯ ಜೊತೆಗೆ, ಪಿತೃಪ್ರಧಾನ ಮೌಲ್ಯಗಳ ಜೊತೆಗೂಡಿ ಸಬಲೀಕರಣದ ಹೆಸರಿನಲ್ಲಿ 'ಮಹಿಳಾ ಮಾದರಿ'ಗಳನ್ನು ರೂಪಿಸುತ್ತಿರುವುದರ ಬಗ್ಗೆ ಗಂಭೀರವಾದ ಚಿಂತನೆ ನಡೆಯಬೇಕಿದೆ. ಚಳವಳಿಯ ಧ್ವನಿಯನ್ನು, ಸಮಾಜಮುಖಿಯಾದ ಒಂದು ದೃಷ್ಟಿಕೋನವನ್ನು ಮಹಿಳಾ ಶಕ್ತಿಯಲ್ಲಿ ನಾವು ಎತ್ತಿಹಿಡಿಯಬೇಕಾಗಿದೆ. ವ್ಯಕ್ತಿಗತ ನಾಯಕತ್ವದ ಅಧಿಕಾರದ ಕಲ್ಪನೆಯನ್ನು ಕೆಡವುತ್ತಲೇ ಸಮಾಜಮುಖಿ ಚಿಂತನೆಯತ್ತ ಗಮನಹರಿಸಬೇಕಾಗಿದೆ. ●



*ಈ ಸಂಚಿಕೆಯ ಪ್ರಾಯೋಜಕರು:*
ಶ್ರೀಮತಿ ಲಲಿತಾ ಸಿದ್ದಬಸವಯ್ಯ

ತಿದ್ದುಪಡಿ: ವಿಶೇಷ ಸಂಚಿಕೆಯ ಸಂಪಾದಕೀಯದ ಎರಡನೆಯ ಪ್ಯಾರಾದ 8ನೆಯ ಸಾಲಿನಲ್ಲಿರುವ 1957ನ್ನು 1857 ಮಾರ್ಚ್ 8 ಎಂದು ಓದಿಕೊಳ್ಳಬೇಕಾಗಿ ಪ್ರಾರ್ಥನೆ.



# ದಾಂಪತ್ಯಯೋಗದಲ್ಲಿ ಅರಳಿದ ಕಾವ್ಯ

■ ಗಿರಿಜಾಶಾಸ್ತ್ರಿ

ಮುಂಬಯಿಯಲ್ಲಿ ಗುರುನಾರಾಯಣ ಪ್ರಶಸ್ತಿಯನ್ನು ಸ್ವೀಕರಿಸಿದ ವಸಂತದಿವಾಣಜಿಯವರೊಡನೆ ವ್ಯಾನಿನಲ್ಲಿ ಮರಳಿ ಬರುತ್ತಿದ್ದೆವು. ಆಗ ಇದ್ದಕ್ಕಿದ್ದಂತೆ ಅವರು "ಕನ್ನಡ ಸಾಹಿತ್ಯದೊಳಗಾ... ಪ್ರೇಮಕಾವ್ಯ ಅನ್ನೂದು ಇಲ್ಲೇ ಇಲ್ಲ. ಇರೂದೆಲ್ಲಾ ಬರೀ Soliloques" ಎಂದಿದ್ದರು. ಗಾಬರಿಯಾದ ನಾನು, ಅದು ಹ್ಯಾಂಗ... ಕಾಕಾ, ಕೆ.ಎಸ್.ನ.... ಪ್ರೇಮ ಕವಿ ಎಂದೆಲ್ಲಾ ನಾನು ರಾಗ ಎಳೆದು ತಡಬಡಿಸಹತ್ತಿದಾಗ, "ಮತ್ತಿನ್ನೇನು ಬರೀ ಅವನಾ ಮಾತಾಡ್ತಾನ.... ಅವಳ್ಗ ಏನನಸ್ತದಾ ಅದ್ನೂ ಅವ್ನಾ ಮತಾಡ್ತಾನ. ಒಬ್ನಾ ಮಾತಾಡ್ತಾನಾ... ಹಂಗ್ ಅಂದ್ ಮ್ಯಾಲ ಅದು ಪ್ರೇಮ ಕಾವ್ಯ ಹೆಂಗಾತೂ..." ಎಂದಿದ್ದರು.

"ನೀನು ಸಾಹಿತಿಯಾಗಿ complete ಆಗಬೇಕಾದರೆ ನಾಟಕಗಳನ್ನು ಬರೆಯಬೇಕು. ಅದನ್ನು ಬರೆಯದಿದ್ದರೆ ನೀನು ಎಷ್ಟು ಬರೆದರೂ ಅಪೂರ್ಣನೇ..." ಎಂದು ಪು.ತಿ.ನ. ಅವರು ಎಚ್.ಎಸ್.ವಿ.ಯವರಿಗೆ ಹೇಳಿದ್ದರಂತೆ. ಅನಂತರವೇ ತಾವು ನಾಟಕ ಬರೆಯಲು ಪ್ರಾರಂಭಿಸಿದು ದಾಗಿ ಈಗ್ಗೆ ಕೆಲ ವರ್ಷಗಳ ಹಿಂದೆ ಮುಂಬಯಿಯ ಸೆಮಿನಾರಿಗೆಂದು ಬಂದಿದ್ದ ಎಚ್.ಎಸ್. ವೆಂಕಟೇಶ್‌ಮೂರ್ತಿಯವರು ಹೇಳಿದ್ದರು.

ಮೇಲೆ ಹೇಳಿದ ದಿವಾಣಜಿಯವರ ಮಾತಿಗೂ ಪು.ತಿ.ನ. ಅವರ ಮಾತಿಗೂ ಸಂಬಂಧವಿದೆ. ಒಮ್ಮುಖವಾದದ್ದು, ಪಾರಸ್ಪರಿಕವಲ್ಲದ್ದು ಪ್ರೇಮವಾಗುವುದಾದರೂ ಹೇಗೆ? ಅದು ಕೇವಲ oneway ಆದದ್ದು. ಮನುಷ್ಯ ಸಂಬಂಧಗಳ ಪರಿಕಲ್ಪನೆಯಲ್ಲಿಯೇ ಪಾರಸ್ಪರಿಕತೆಯೆನ್ನುವುದು ಅಡಗಿದೆ. ಪರಸ್ಪರವಲ್ಲದ್ದು ಸಂಬಂಧವಾಗಲಿಕ್ಕೆ ಸಾಧ್ಯವಿಲ್ಲ. ಪ್ರೇಮವಿಲ್ಲದ ಸಂಬಂಧ ಪೂರ್ಣವಾಗುವುದಕ್ಕೂ ಸಾಧ್ಯವಿಲ್ಲ. ಪೂರ್ಣವಾಗುವುದೆಂದರೆ ಪೂರಕವಾಗುವುದು. ಪೂರ್ಣತೆಯ ಎರಡೂ ಅಂಗಗಳು ಪ್ರಸ್ತುತಕ್ಕೆ ಬರುವುದು.

ಹಾಗೆ ನೋಡಿದರೆ ನಮ್ಮ ಕುಟುಂಬ/ದಾಂಪತ್ಯ ವ್ಯವಸ್ಥೆ ಎನ್ನುವುದು ಕೂಡ ಒಂದು ರೀತಿಯ 'Soliloquy'ಯೇ. ಇನ್ನು ಇಲ್ಲಿ ಸಹಜವಾದ ಪ್ರೇಮ ಅರಳುವುದಾದರೂ ಹೇಗೆ? ಕುಟುಂಬವನ್ನು ಭೌತಿಕವಾಗಿ ಪೋಷಿಸುವ ವರ್ಗಕ್ಕೆ ಮಾತ್ರ ಅದನ್ನು ರೂಪಿಸುವ, ನಿರ್ಧರಿಸುವ ಹಕ್ಕಿದೆ. ಆದರೆ ಅದನ್ನು ಭಾವನಾತ್ಮಕವಾಗಿ ಬೆಸೆಯಬಲ್ಲ ವರ್ಗಕ್ಕೆ ಮಾತ್ರ ಇಲ್ಲ. ಹೆಚ್ಚಿನ ಕೌಟುಂಬಿಕ ಮೌಲ್ಯಗಳು ಈ ವರ್ಗಕ್ಕೆ ಸಹಕಾರಿಯಾಗಿಲ್ಲ. ಹಾಗೆ ನೋಡಿದರೆ ವಾಸ್ತವವಾಗಿ ಈ ಎರಡರ ನಡುವೆ ಎದ್ದಿರುವ/ಬಿದ್ದಿರುವ ಕಂದರವೇ ದಾಂಪತ್ಯ.

ಸಂಸಾರವನ್ನು ಒಂದು ಬಂಡಿಗೂ ಅದರ ಎರಡು ಚಕ್ರಗಳನ್ನು ಗಂಡು ಹೆಣ್ಣಿಗೂ ಹೋಲಿಸುವ ಚರ್ವಿತಚರ್ವಣ ಮಾತುಗಳು ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ನಡೆದು ಬರುತ್ತಿವೆ. ಇದರ ಹಿಂದಿರುವ ತಾತ್ವಿಕ ನಂಬಿಕೆ ಬಹಳ ಸೊಗಸಾಗಿದೆ. ಆದರೆ ಇಲ್ಲಿ ನಿಜವಾಗಿ ಬಂಡಿಯನ್ನು ನಡೆಸುವುದಲ್ಲ. ಎಳೆಯುವುದಾಗಿದೆ. ಎಳೆಯುವುದಕ್ಕೂ, ನಡೆಸುವುದಕ್ಕೂ ಬಹಳ ಅಂತರವಿದೆ. ಎಳೆಯೆನ್ನುವಲ್ಲಿ ಹಿಂಸೆ ಬಲಾತ್ಕಾರಗಳು ಇದ್ದರೆ, 'ನಡೆಸು' ಎನ್ನುವಲ್ಲಿ ಸಾಮರಸ್ಯ, ಪ್ರೀತಿ ಇದೆ. ಶಕ್ತಿಶಾಲಿಯಾಗಿರುವುದು (ಮಾಂಸಲವಾಗಿ) ಎಳೆದರೆ, ಮಾಂಸಬಲವಿಲ್ಲದ್ದು ಅಂದರೆ ಬಲಹೀನವಾಗಿರುವುದು ಎಳೆಯಲ್ಪಡುತ್ತದೆ. ನಮ್ಮ ಸಮಾಜದಲ್ಲಿ ಬಂಡಿಯನ್ನು ಎಳೆದುಕೊಂಡು ಹೋಗಬೇಕಾಗಿರುವುದು ಮುಖ್ಯವಷ್ಟೆ. ಅಥವಾ ಬೇಕಾಗಿರುವುದೂ ಅದೇ. ಒಟ್ಟಿನಲ್ಲಿ ಎಳೆಯುವ ಕಾರ್ಯ ನಿಲ್ಲಬಾರದು.

ಶ್ರೀನಿವಾಸ ಹಾವನೂರರು ಮರಾಠಿಯ ಛಾಯಾದಾತಾರ್ ಅವರ ಪ್ರಸಿದ್ಧ ಕೃತಿ 'ಸ್ತ್ರೀ–ಪುರುಷ' ಇದರ ಕನ್ನಡ ಅನುವಾದ (ಅನು: ಸರಸ್ವತಿ ರಿಸಬೂಡ)ಕ್ಕೆ ಮುನ್ನುಡಿ ಬರೆಯುತ್ತಾ ಬಹಳ ಅದ್ಭುತವಾದ ಮಾತೊಂದನ್ನು ಹೇಳುತ್ತಾರೆ. "ಸ್ತ್ರೀಯ ಸ್ಥಾನಮಾನ ಪುರುಷರಿಗೆ ಸಮಾನವಾದದ್ದಿರಬೇಕು ಎನ್ನುವುದಕ್ಕಿಂತ ಅದು ಸಮಾನಾಂತರವಾಗಿ (equal-parallel) ಇರಬೇಕು. ಅವರಿಬ್ಬರ ಜೀವನ 'ಕೂಡಿ' ಎನ್ನುವುದಕ್ಕಿಂತ ಜೊತೆ ಜೊತೆಯಾಗಿ ಸಾಗಬೇಕು. ಸಂಸಾರ ರಥಕ್ಕೆ ಗಂಡು ಹೆಣ್ಣು ಎರಡು ಗಾಲಿಗಳಿದ್ದಂತೆ ಎಂದು ಮಾಮೂಲಿಯಾಗಿ ಹೇಳುವುದುಂಟು. ಈ ಗಾಲಿಗಳು ಜೊತೆಜೊತೆಯಾಗಿ ಆದರೆ ಪ್ರತ್ಯೇಕ ಕೆಲಸಮಾಡುತ್ತವೆ. ಹಾಗೆಯೇ ಸ್ತ್ರೀ–ಪುರುಷರ ಬಾಳುವೆ" ಎಂದು ಹೇಳುತ್ತಾರೆ.

ಇಲ್ಲಿ ಸಮಾನಾಂತರವಾಗಿ 'ಇರಬೇಕು' ಎಂದು ಹೇಳುವಾಗ ಅದು ವಾಸ್ತವವಾಗಿ 'ಇಲ್ಲ' ಎನ್ನುವುದನ್ನೇ ಧ್ವನಿಸುತ್ತದೆ. ಇರುವ ಮತ್ತು ಇರಬೇಕಾದುದರ ನಡುವಿನ ಕಂದರದ ಕಡೆಗೆ ಇದು ಬೆಳಕು ಚೆಲ್ಲುತ್ತದೆ. ಇಂತಹ ಸಮಾನಾಂತರತೆಗೆ ಹತ್ತಿರವಿದ್ದ ಒಂದು ಸ್ಥಿತಿ ಪ್ರಾಚೀನ ಭಾರತದಲ್ಲಿದ್ದಿತೆಂದು (ಋಗ್ವೇದ ಕಾಲ) ಅಳ್ತೇಕರ್ ಮುಂತಾದ ಅನೇಕ ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ನಮಗೆ ಇದ್ದುದರ ಬಗ್ಗೆ ಯಾವ ತಕರಾರೂ ಇಲ್ಲ. ಪ್ರಶ್ನೆ ಇರುವುದೆಲ್ಲಾ ಇರುವುದರ ಬಗೆಗೆ, ಇರಬೇಕಾದುದರ ಬಗೆಗೆ.

ಗಾಡಿಗೆ ಕಟ್ಟಿರುವ ಎತ್ತುಗಳು ಎಂದಾಗ ಆ ಎರಡೂ ಎತ್ತುಗಳ ಗುರಿ, ದಾರಿ, ನೋಟ ಎಲ್ಲಾ ಒಂದೇ ಆಗಿದ್ದಾಗ ಮಾತ್ರ ಪ್ರಯಾಣ ಸುಲಭ. ಆದರೆ ಇಲ್ಲಿ ಹಾಗಿಲ್ಲ. ದಾರಿ, ಗುರಿ, ನೋಟವೆಲ್ಲ ಒಂದು ಎತ್ತಿನದು. ಇನ್ನೊಂದು ಎತ್ತಿಗೆ ಉಳಿದಿರುವ ಎರಡೇ ಪರ್ಯಾಯ ಗಳೆಂದರೆ, ಒಂದೋ ಈಗಾಗಲೇ ಮೊದಲನೆಯ ಎತ್ತು ನಿರ್ಧರಿಸಿದ ದಾರಿಯಲ್ಲಿ ಸುಮ್ಮನೆ ಕಣ್ಣುಮುಚ್ಚಿಕೊಂಡು ಸಾಗಬೇಕು. ಇಲ್ಲ, ವಿರುದ್ಧ ದಿಕ್ಕಿನಲ್ಲಿ ಬಂಡಿ ಎಳೆಯುವ ನೋವಿಗೆ ಗುರಿಯಾಗಬೇಕು. ಸಂಘರ್ಷಕ್ಕೆ

ಸಿಲುಕಿ ಹಾಕಿಕೊಳ್ಳಬೇಕು. ಇದನ್ನೇ ಶಶಿ ದೇಶಪಾಂಡೆಯವರು ಯಾವ ಎತ್ತು ತಾನೆ ತಾನಾಗಿಯೇ ವಿರುದ್ಧ ದಿಕ್ಕಿನಲ್ಲಿ ಬಂಡಿ ಎಳೆದು ನೋವಿಗೆ ಗುರಿಯಾಗಲು ಬಯಸುತ್ತದೆ. ಎಂದು ತಮ್ಮ That long Silence ಕಾದಂಬರಿಯಲ್ಲಿ ದಾಖಲಿಸಿದ್ದಾರೆ.

ಸುಮತೀಂದ್ರ ನಾಡಿಗ ಅವರ 'ದಾಂಪತ್ಯಗೀತೆ'ಗಳನ್ನು ಓದಿ ಮುಗಿಸುವಾಗ ಮೇಲೆ ಹೇಳಿದ ಎಲ್ಲ ಓದುಗಳೂ ನನ್ನ ಜ್ಞಾಪಕಕ್ಕೆ ಬಂದವು. ಇದನ್ನು ಅವರು 'ದಾಂಪತ್ಯಗೀತೆ' ಎನ್ನುತ್ತಾರೆ. 'ದಂಪತಿ' ಎನ್ನುವ ಶಬ್ದಕ್ಕೆ ಅವರೇ ಹೇಳುವಂತೆ ಇಬ್ಬರು ಒಡೆಯರು-ನಾಯಕರು. ಅಂದರೆ ಕುಟುಂಬವೊಂದಕ್ಕೆ ಒಬ್ಬನೇ ಪತಿಯಲ್ಲ ಇಬ್ಬರು. ಇಬ್ಬರೂ ನಾಯಕರಾಗಿ ಇರಬೇಕು ಎನ್ನುವುದೇ ಕವಿಯ ಆಶಯ, ಆದರ್ಶ ಎಲ್ಲ. ಆದರೆ ಅದು ಒಮ್ಮೊಮ್ಮೆ ಹಾಗಿಲ್ಲದೇ ಹೋದುದರ ವಿಷಾದ ಈ ಗೀತೆಗಳ ಮೂಲಕ ವ್ಯಕ್ತವಾಗುತ್ತದೆ. ಇದೊಂದು ರೀತಿಯ ಆತ್ಮನಿವೇದನ ಕಾವ್ಯ. ಇದು Soliloquy ಯೇ ಆಗಿದ್ದರೂ ಅದರೊಳಗೆ ಆತ್ಮಪರಿವೀಕ್ಷಣೆ ಸಾಧ್ಯವಾಗಿದೆ. ಈ ಆತ್ಮಪರಿವೀಕ್ಷಣೆಯಲ್ಲಿ ಪುರುಷ ವ್ಯವಸ್ಥೆಯ ಸಾಂಸ್ಕೃತಿಕ ತಪ್ಪುಗಳು ಬೆಳಕಿಗೆ ಬಂದಿವೆ. ನನ್ನ ಮಟ್ಟಿಗಂತೂ ಇದು ಆಕರ್ಷಣೀಯವೆನಿಸುವುದು ಈ ಕಾರಣದಿಂದಾಗಿಯೇ.

ಇಲ್ಲಿ ಕಾವ್ಯ ಧರ್ಮ ಮತ್ತು ಜೀವನ ಧರ್ಮ ಎರಡೂ ಒಟ್ಟಿಗೆ ಸಾಗುತ್ತವೆ. ಕಾವ್ಯ ಮತ್ತು ಸಖಿ ಎರಡೂ ಪರಿಕಲ್ಪನೆಗಳು ಒಂದೇ ಪರಿಕಲ್ಪನೆಯಿಂದ ಒಡಮೂಡಿವೆ. ನಾಯಕ ಕವಿಯಾಗಿ ಕಾವ್ಯಕ್ಕೆ ಕಾದಿರುವಂತೆಯೇ, ಸಖಿಗೂ ಕಾದಿದ್ದಾನೆ. ಹಸಿದಿದ್ದಾನೆ. ಇದು ಕೇವಲ ದೈಹಿಕ ಹಸಿವಲ್ಲ. ಈ ಹಸಿವೆನ್ನುವುದು ಕಾಣ್ಕೆಯ ಹಿಂದಿರುವ ತಹತಹ. ಹಾಗಾಗದಿದ್ದರೆ ದಾಂಪತ್ಯವೆನ್ನುವುದು ಮುರಿದುಬೀಳುತ್ತದೆ, ಕಾವ್ಯ ಕಾವು ಕೂರುವುದೇ ಇಲ್ಲ. ಇದು ಆತ್ಮ ಸಾಂಗತ್ಯದ ಹಸಿವು. ಇಂತಹ ಹಸಿವೊಂದನ್ನು ಭಾರತೀಯ ನೆಲೆಯಲ್ಲಿ ಮಾತ್ರ ಅರ್ಥಮಾಡಿಕೊಳ್ಳಲು ಸಾಧ್ಯ. ಇದು ಅವಳ 'ಅಂಗಾಂಗಗಳ ಸ್ಫುಟತೆಯಾಚೆಗೆ ಇರುವ ಲಾವಣ್ಯ' ಭೌತಿಕ ಅಸ್ತಿತ್ವಕ್ಕೆ ಮೀರಿದ್ದು. ಕಾವ್ಯ ಮತ್ತು ಕವಿಯ ನಡುವೆ ಇರುವ ಸಂಬಂಧದಂತೆಯೇ ಗಂಡು ಹೆಣ್ಣಿನ ಸಂಬಂಧವೂ ಆಧ್ಯಾತ್ಮಿಕವಾದುದು. ಹಾಗೆ ಆದಾಗ ಮಾತ್ರ ಗಂಡು ಹೆಣ್ಣಿನ ಯೋಗದ ಅರಿವಾಗುವುದು.

**ದಾಂಪತ್ಯವೆಂಬುದು ಜೊತೆಗೆ ಮಾಗುವ ದಿವ್ಯ.**
**ಮಾಗುವವರಿಗೆ ಬೆಂಕಿ ಸುಡುವುದಿಲ್ಲ,**
**ತ್ಯಾಗವಿಲ್ಲದ ಸಖ್ಯ, ಅವರಿವರ ವಿಶೇಷ**
**ಉಳಿಸಿ ಬೆಳಸದ ಸಖ್ಯ ಸಖ್ಯವಲ್ಲ.**

ಇಡೀ ದಾಂಪತ್ಯಗೀತೆಗಳ ಸಂಕಲನಕ್ಕೆ ಬರೆದ ಒಂದು ವ್ಯಾಖ್ಯೆಯಂತಿದೆ ಮೇಲಿನ ಸಾಲುಗಳು. "ಬಾಳುವುದರ ಬಗ್ಗೆ, ಬೆಳೆಯುವುದರ ಬಗ್ಗೆ, ಬೆಳೆಯುತ್ತ ಮಾಗುವುದರ ಬಗ್ಗೆ ಕನ್ನಡದ ಒಂದು ಒಳ್ಳೆಯ ಪದ್ಯ ಸುಮತೀಂದ್ರ ನಾಡಿಗರ ದಾಂಪತ್ಯಗೀತೆ" ಎಂದು ಯು. ಆರ್. ಅನಂತಮೂರ್ತಿಯವರು ಬೆನ್ನುಡಿಯಲ್ಲಿ ಗುರುತಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ.

'ಸಂಸಾರವೆನ್ನುವುದು ಶಬ್ದಪಾಕ ಅರ್ಥಪಾಕ' ಅದನ್ನು ಗಂಡ ತನ್ನ ಹೆಂಡತಿಗೆ ರುಚಿಸುವಂತೆ ಪರಿವರ್ತಿಸಿದ್ದಾನೆ. ರುಚಿ ನೋಡಿ ಪ್ರಮಾಣ ಪತ್ರವನ್ನು ಕೊಡಬೇಕಾಗಿರುವವಳು ಹೆಂಡತಿಯೇ ಆಗಿದ್ದಾಳೆ. ಹಾಗೆಯೇ ಕಾವ್ಯ ಕೂಡ. ಹದವಾಗಿ ಪಾಕವಾಗದೇ ಇದ್ದಲ್ಲಿ ಎರಡೂ ವಿಫಲವೇ.

**"ಅಧಿಕಾರ ನನ್ನದು, ನಿನ್ನ ಸ್ವಾಮ್ಯ,**

**ಕಾವ್ಯ ಕರ್ಮನು ನಾನು ಅರ್ಧಾಂಗನಾದರೂ ಪೂರ್ತಿಮಾಡುವ ನೀನು ಪೂರ್ಣಪ್ರಾಕಾಮ್ಯ"** ಶಿವನಾದರೂ ಶಿವೆಯಿಲ್ಲದೆ ಶವನಾಗಿಬಿಡುವ. ದಾಂಪತ್ಯ ಆದರ್ಶದ ತುರೀಯ ಕಲ್ಪನೆ ಅರ್ಧನಾರೀಶ್ವರ ಕಲ್ಪನೆಯಲ್ಲಿ ಅಡಗಿರುವುದನ್ನು ಈ ಸಾಲುಗಳು ಧ್ವನಿಸುತ್ತವೆ. ಯಾಕೆಂದರೆ ಮನುಷ್ಯ ಕಟ್ಟಿಕೊಂಡ ಲೋಕದಲ್ಲಿ ಹೆಣ್ಣಿಗೆ ಬೇಕಾದಂತೆ ಯಾವ ಅನುಭವ ಲೋಕಗಳೂ ರೂಪುಗೊಂಡಿಲ್ಲ ಅಥವಾ ರೂಪುಗೊಳ್ಳುವುದಿಲ್ಲ ಎನ್ನುವಾಗ ಕವಿಯ ಆಶಯ ಇಲ್ಲಿ ಎಷ್ಟು ಘನವಾದದ್ದು ಎಂಬುದು ವೇದ್ಯವಾಗುತ್ತದೆ.

ಇಲ್ಲಿ 'ನಡೆಯುವ' ಮತ್ತು 'ನಡೆಸುವ' ಎರಡು ಕ್ರಿಯಾ ಪದಗಳಿವೆ. ನಡೆಯುವವ ಕವಿಯಾದರೆ ನಡೆಸುವ ಕೆಲಸ ಸ್ಫುರಣೆಯದೇ. ಸ್ಫುರಣೆಯೇ ಸಖಿ, ಅವಳೇ ಸ್ಫೂರ್ತಿ, ಅವಳೇ ಮಾದರಿ. ಸಂಸಾರದ ರಸ ಮತ್ತು ಕಾವ್ಯದ ರಸ ಎರಡೂ ಒಂದೇ. ಅಥವಾ ಕಾವ್ಯವೇ ಸಂಸಾರ. ಸಂಸಾರ ಇಲ್ಲದಿದ್ದರೆ ಕಾವ್ಯ ಹುಟ್ಟುವುದಾದರೂ ಹೇಗೆ. ಪಾಡು ಹಾಡಾಗುವುದು ಹೇಗೆ. ಅನುಭವ ವಿಶೇಷಕ್ಕಾಗಿ, ಸ್ವೀಕೃತಿಗಾಗಿ, ಕರುಣೆಗಾಗಿ, ಸ್ಫುರಣೆಗಾಗಿ, ಕಾರಯತ್ರಿಗಾಗಿ ಕರೆದು ಹಂಬಲಿಸುತ್ತಾನೆ



ಗಂಡು. ಪ್ರತಿಭೆಯ ಎಲ್ಲ ಪರಿಕರಗಳೂ ಇಲ್ಲಿ ಹೆಣ್ಣಾಗಿಯೇ ಇರುವುದು, ಅದಕ್ಕಾಗಿ ಗಂಡು ಹಂಬಲಿಸುವುದು ಮೇಲೆ ಹೇಳಿದಂತೆ ಪೂರ್ಣಪ್ರಾಕಾಮ್ಯದ ಯೋಗದ ಸ್ವರೂಪವನ್ನೇ ವ್ಯಕ್ತಪಡಿಸುತ್ತದೆ. ಕವಿ ಬೆಳಕಿಗೆ ಬರಲು ಪ್ರತಿಭೆಯಿಂದ ಮಾತ್ರ ಸಾಧ್ಯ. ಹಾಗೆಯೇ ದಾಂಪತ್ಯದೊಳಗೆ ಹೆಣ್ಣಿನಿಂದ ಗಂಡು. ಬೇಂದ್ರೆ, ಅಡಿಗರ ದೃಷ್ಟಿಕೃಪೆಯಿಂದ ನಡೆದ ಈ ಕವಿಯ ಕಾವ್ಯ ಎಷ್ಟೋ ಸಲ ಮುಗ್ಗರಿಸಿದ್ದಿದೆ, ದಾಂಪತ್ಯದ ಹಾಗೆಯೇ. ಅಡಿಗರ ಟೀಕೆ ಕೂಡ ಅವರ ಕಾವ್ಯ ಕೃಷಿಗೆ ವರವಾದಂತೆ ದಾಂಪತ್ಯದಲ್ಲಿನ ವಿರಸಕೂಡ ಅದರ ಬಂಧವನ್ನು ಗಟ್ಟಿಗೊಳಿಸಿದೆ. ಕಾವ್ಯಧರ್ಮವನ್ನು ಹೀಗೆ ಜೀವನ ಧರ್ಮಕ್ಕೆ ಸಂವಾದಿಯಾಗಿ ನೋಡುವಾಗ ಗಂಡು ಹೆಣ್ಣಿನ ನಡುವಿನ ಪಾರಸ್ಪರಿಕತೆಯ ಜೊತೆಗೆ ಅವುಗಳ ಸಾಮಾಜಿಕ ಸ್ಥಾನಕ್ಕೆ ಒದಗಬೇಕಾಗಿರುವ ನೈಸರ್ಗಿಕ ಸಾಮ್ಯತೆಯ (equity) ಮಹತ್ವ ಕೂಡ ಅರಿವಾಗುತ್ತದೆ.

ಈ ಕವಿತೆಗಳು ಇಬ್ಬರು ನಾಯಕರು (ಗಂಡ-ಹೆಂಡತಿ) ಸಂಸಾರವನ್ನು ತೂಗಿಸಿಕೊಂಡುಹೋಗುವಲ್ಲಿ ಇರಬೇಕಾದ ಪರಸ್ಪರ ಗ್ರಹಿಕೆ, ವೈಚಾರಿಕತೆ, ಪ್ರೀತಿ, ಅನುನಯ, ಅಂತಃಕರಣದ ಕಡೆಗೆ ಗಮನ ಸೆಳೆಯುತ್ತವೆ. ಆದರೆ ಪಿತೃಪ್ರಧಾನ ವ್ಯವಸ್ಥೆಯ ಪ್ರತಿನಿಧಿಯಾಗಿ ಅಂತಹ ಒಂದು ಪಾರಸ್ಪರಿಕತೆಗೆ ಎರವಾದ ಪಾಪಪ್ರಜ್ಞೆ ಕವಿಗೆ ಕಾಡಿರುವುದು ಬಹಳ ಮಹತ್ವದ ಸಂಗತಿ. ಇಡೀ ಮಾನವ ಸಂಸ್ಕೃತಿ ಹೆಣ್ಣಿನ ಮೇಲೆ ಎಸಗಿರುವ ಪಾಪಕ್ಕೆ ತನ್ನನ್ನು ಹೊಣೆ ಮಾಡಿಕೊಳ್ಳುತ್ತಾರೆ. "ನನ್ನ ಮಾರ್ಗವೆ ನಿನ್ನ ಮಾರ್ಗವಾಗಲಿ ಎಂದು ನನ್ನಹಂಕಾರವನೆ ಮೆರೆದೆನಲ್ಲ"...

**"ನಾನೇಕೆ ಗಂಡಾದೆ ಗಂಡಾಂತರ."**

**"ವ್ಯಕ್ತಿತ್ವ ಇಬ್ಬರಿಗೂ ಬೇರೆ ಬೇರೆಯೆ ಎಂದು**
**ತಿಳಿವುದಕ್ಕೆಷ್ಟು ದಿನ ತೆಗೆದುಕೊಂಡೆ.**
**ಈಗಲೂ ಒಮ್ಮೊಮ್ಮೆ ತಿಳಿವುದಿಲ್ಲ ಎನ್ನಿಸಲು**
**ಕೆರೆದುಕೊಳ್ಳುತ್ತೇನೆ ನನ್ನ ಮಂಡೆ"...**
**"ನನಗೆ ಬೇಕೆನ್ನಿಸುವ ನನ್ನರ್ಧವೆನ್ನಿಸುವ**
**ನನ್ನ ಪಾಲಿಗೆ ಸಿಕ್ಕ ಸ್ವರ್ಗ ನೀನು.**
**ಒಬ್ಬರಿನ್ನೊಬ್ಬನಿಗೆ ನರಕವೆನ್ನಿಸಿದಾಗ ನಾನು**
**ಪರಿವರ್ತಿಸಿದ ನರಕ ನೀನು."**

**"ನಿಮ್ಮ ಮಾತಿಗೆ ನಾನು ಒಮ್ಮೆ ಮರುಳಾಗಿದ್ದೆ**
**ಇಂಥ ಮಾತುಗಳನ್ನು ಸಾಕು ಎಂದೆ."**

ಈ ಎಲ್ಲ ಸಾಲುಗಳ ಮೂಲಕ ಕವಿ ಹೆಣ್ಣಿನ ಬಗೆಗಿನ ಸಾಂಸ್ಕೃತಿಕ ಅಪಮೌಲ್ಯಕ್ಕೆ ಕಾರಣವಾದುದರ ಜವಾಬ್ದಾರಿಯನ್ನು ತನ್ನ ಮೇಲೆ ಎಳೆದುಕೊಳ್ಳುತ್ತಾರೆ. ಇನ್ನೊಂದು ಕಡೆ ದಾಂಪತ್ಯವನ್ನು ಕಂಪಾಸಿಗೆ ಹೋಲಿಸಿ (ಕೈವಾರ) "ಪ್ರೇಮಿ ಪ್ರೇಯಸಿ ಸೇರಿ ಕಂಪಾಸು... ನೀನು ಊರಿದ ಕಾಲು ನಾನು ತಿರುಗುವ ಕಾಲು." ಇಲ್ಲಿ ಪ್ರೇಯಸಿಯೇ ಕೇಂದ್ರ. ಅವಳೆಂದರೆ ಸ್ಥಾಯೀಭಾವ, ಇವನೆಂದರೆ ಸಂಚಾರಿ. ವ್ಯಭಿಚಾರಿ... ಹೆಣ್ಣು ಮತ್ತು ಗಂಡುಗಳ ನಡುವಿರುವ ಎರಡು ಲೋಕಗಳ ಪರಿಚಯವನ್ನು ಅದರ ವಿಸ್ತಾರ ಹಾಗೂ ಅಗಾಧ ಅಂತರವನ್ನು ಈ ಸಾಲುಗಳು ಪರಿಚಯಮಾಡಿಸುತ್ತವೆ. ಕೇಂದ್ರವಿಲ್ಲದಿದ್ದರೆ ವೃತ್ತದ ಚಲನೆ ಸಾಧ್ಯವಿಲ್ಲ. ಎನ್ನುವ ನಿಯಂತ್ರಕ ಶಕ್ತಿಯೇ ಹೆಣ್ಣಾಗಿರುವುದರ ಬಗ್ಗೆ ಕವಿಗೆ ಹೆಮ್ಮೆ ಇದೆ. ಆದರೆ ಅದನ್ನು ಇನ್ನೊಂದು ನೆಲೆಯಲ್ಲಿ ಗ್ರಹಿಸಿದರೆ ಅವಳು ಕೇಂದ್ರವೊಂದಕ್ಕೇ ಬಂಧಿತಳಾಗಬೇಕಾಗಿರುವ ವಿಷಾದವನ್ನೂ ಇದು ಹೇಳುವುದಿಲ್ಲವೇ? ಅಂದರೆ ಕುಟುಂಬ, ಮದುವೆ ಎನ್ನುವ ವ್ಯವಸ್ಥೆಗಳಿಗೆ ಬದ್ಧಳಾಗಬೇಕಾಗಿರುವವಳು ಹೆಣ್ಣು ಮಾತ್ರ, ಗಂಡಿಗೆ ಈ ಯಾವ ನಿಯಮಗಳೂ ಲಾಗೂ ಆಗುವುದಿಲ್ಲ. ಎಂಬುದನ್ನೂ ಈ **"ಊರಿದ ಕಾಲು"** ಹೇಳುತ್ತದೆ. ಇಲ್ಲಿ ಅವಳಿಗೆ ಚಲನೆ ಇಲ್ಲ. ಚಲನೆ ಇರುವುದೆಲ್ಲ ಅವನಿಗೆ ಮಾತ್ರ. ಮುಂದೆ **"ನಮ್ಮೆರಡು ದೃಷ್ಟಿಗಳು ಕೂಡಲಿಲ್ಲ"** ಎನ್ನುವಾಗ ಕವಿ ಮೇಲಿನ ಊರಿದಕಾಲು ತಿರುಗುವಕಾಲಿನ ಅಂತರಕ್ಕೆ ಕಾರಣ ಕೊಡುವುದಿಲ್ಲವಾದರೂ, ಕಂದರ ಉಂಟಾದುದರ ವಿಷಾದವನ್ನಂತೂ ವ್ಯಕ್ತಪಡಿಸುತ್ತಾರೆ. ಆದರೆ ನಿಜವಾದ ಕಾರಣ ಬಹುಶಃ ಈ ಎರಡೂ ಕಾಲುಗಳ ಚಲನೆಗಳ ಸ್ವರೂಪದಲ್ಲಿಯೇ ಅಡಗಿದೆ. ಇದಕ್ಕಾಗಿ ಕವಿ ಹೆಮ್ಮೆ ಪಡುವುದು ಸ್ವಲ್ಪ ಇರಸುಮುರುಸಾಗುತ್ತದೆ. ಬಹುಶಃ ಕಂಪಾಸಿನ ಪರಿಕಲ್ಪನೆಯನ್ನು ಈ ನೆಲೆಯಿಂದ ನೋಡಿದಾಗ ನನ್ನ ತರ್ಕವನ್ನು ಅವರೂ ಒಪ್ಪಿಯಾರೆಂದು ನಾನು ಭಾವಿಸುತ್ತೇನೆ.

ಈ ದಾಂಪತ್ಯಗೀತೆಗಳು ಸುಮತೀಂದ್ರನಾಡಿಗರ ಆತ್ಮಪರಿವೀಕ್ಷಣೆ ಮಾಡಿಕೊಳ್ಳುವಾಗ ಕವಿ ತಾನು ಗಂಡೆನ್ನುವ ದೇಹಭಾವವನ್ನು ಮೀರಿರುವುದು ಬಹಳ ಮುಖ್ಯವಾದ ಸಂಗತಿಯಾಗಿದೆ. ಭವಿಷ್ಯದ ಮುನ್ನೋಟವಿದು. ಆಕ್ರಮಣ, ಒತ್ತುವರಿ, ವಿಸ್ತರಣೆ, ಯುದ್ಧ ಗಂಡು ಕ್ಷೇತ್ರದ ಪರಿಭಾಷೆಗಳಿವು. ಅವನ ಭಾಷೆಯೆಂದರೆ ಸೋಲರಿಯದ ಭಾಷೆ. ಆದರೆ ಇಲಿ

**"ಭಾಷೆ ಹಾಲಿಗೆ ನಾನು ಹುಳಿಯನ್ನು ಹಿಂಡಿದ್ದೆ ಮೊಸರನ್ನು**
**ಮಾಡುವ ವಿದ್ಯೆ ಹೊಳೆಯಲಿಲ್ಲ."**
**"ತಲೆ ಕೊಯ್ದಿಟ್ಟರೂ ಸೋರೆ ಬುರುಡೆ**
**ಇದೆಂದು ನೀನದನು ನೂಕಿಬಿಟ್ಟೆ**
**ರುಂಡ ಉರುಳುತಿತ್ತು ನಿನ್ನ ಕಾಲಡಿಯಲ್ಲಿ**
**ಮುಂಡ ನಿಂತೇ ಇತ್ತು ಪ್ರತಿಮೆಯಂತೆ."**

**"ನೀನು ತಾಯಿ ಆದೆ**
**ನಾನು ಹುಟ್ಟಿದೆ ಪುತ್ರ ರೂಪದಿಂದೆ"**

ಇಂತಹ ಸೋತು ಗೆಲ್ಲುವ ಸಾಲುಗಳು ಗಂಡಿನ ಶಬ್ದಕೋಶಕ್ಕೆ ಅಪರೂಪ ವಾದವುಗಳು. ಹಾಗೆ ನೋಡಿದರೆ ಇಲ್ಲಿ ಹೆಂಡತಿಗೇ ಹೆಚ್ಚು ಅಂಕಗಳು. ಈ ದಾಂಪತ್ಯಗೀತೆಗಳಲ್ಲಿ ಹೆಂಡತಿಯನ್ನೇ ಹೆಚ್ಚು ಶಕ್ತಿಯುತಳನ್ನಾಗಿ ಮಾಡಲಾಗಿದೆ. ಅವನಾದರೋ ಅನೇಕ ದೌರ್ಬಲ್ಯಗಳ ಮೊಟ್ಟೆ. ದಾಂಪತ್ಯದ ಮಹತ್ವದ ಅರಿವಿದ್ದೂ ಇಲ್ಲಿಯ ನಾಯಕ ಅನೇಕ ಹೆಣ್ಣುಗಳ ಜೊತೆ ಚೆಲ್ಲಾಟವಾಡಿದ್ದಾನೆ. ಪರದೇಶದಲ್ಲಿ ದೂರದ ಹೆಂಡತಿಯನ್ನು ಮರೆಯುತ್ತಾನೆ. ಆದರೆ ಹೆಂಡತಿ ಮಾತ್ರ, ಹೆಣ್ಣಿನ ಶಕ್ತಿ ಮತ್ತು ಮಿತಿ ಎರಡನ್ನೂ ಏಕಕಾಲಕ್ಕೆ ತೆರೆದು ತೋರಿಸುವ ಅದೇ ಕಂಪಾಸಿನ ಊರಿದ ಕಾಲಿನ ಹಾಗೆ ಒಂದೇ ಕೇಂದ್ರಕ್ಕೆ ನಿಷ್ಠುರವಾಗಿ ಬದ್ಧಳಾಗಿದ್ದಾಳೆ. ಸೋಜಿಗದ ಸಂಗತಿಯೆಂದರೆ ನಾಯಕನಿಗೆ ಇದರ ಅರಿವು ಉಂಟಾಗಿರುವುದು, ಮತ್ತು ಅದನ್ನೆಲ್ಲಾ ಹೆಂಡತಿಯೊಂದಿಗೆ ತೋಡಿಕೊಳ್ಳಲು (ಕನ್‌ಫೆಸ್) ಸಾಧ್ಯವಾಗಿರುವುದು. ಆಗ ಅವಳು **'ಮುನಿದ ಮುನ್ನೀರೆ, ಮಾರಿ,'** ಅವಳ ಮುಂದೆ **"ಹೆಡೆಬಿಚ್ಚಿದ ನಾಗರ"**ದಂತಹ ಪತಿ ಹೆಡೆಮುದುರಿ ಹಿಮ್ಮೆಟ್ಟುತ್ತಾನೆ. ತನ್ನ ಸೋಲನ್ನು ಒಪ್ಪಿಕೊಂಡು **'ಸಖ್ಯ ಚಿಗುರಿಸಿ'**ಕೊಳ್ಳುತ್ತಾನೆ. ಸಖ್ಯದ ಆಖ್ಯಾನ ಮುಂದುವರೆಯುತ್ತದೆ.

ಸುಮತೀಂದ್ರ ನಾಡಿಗರ ಈ ಕವಿತೆಗಳನ್ನು ದಾಂಪತ್ಯ ದೀಪಿಕೆ ಎಂದೂ ಕರೆಯಬಹುದೇನೋ. ಈ ಲೇಖನದ ಹಿಂದೆ ದಾಂಪತ್ಯ ಗೀತೆಗಳ ಹಿಂದಿನ ಆಶಯವನ್ನು ಮಾತ್ರ ಗಮನದಲ್ಲಿರಿಸಿಕೊಳ್ಳಲಾಗಿದೆ. ಇದೊಂದು content analysis ಮಾತ್ರ. ಈ ಕವಿತೆಗಳು ಬಯಲಾಗಿಸುವ ಸಾಮಾಜಿಕ ಸ್ವರೂಪ ಮುಖ್ಯವೆನಿಸಿದ್ದರಿಂದ ಕಾವ್ಯ ಸ್ವರೂಪದ ತಾತ್ತ್ವಿಕ ಜಿಜ್ಞಾಸೆಯ ಕಡೆಗೆ ಗಮನ ಕೊಡಲಾಗಿಲ್ಲ. ಇವು ಸುಮತೀಂದ್ರ ನಾಡಿಗರ ದಾಂಪತ್ಯ ಗೀತೆಗಳ ಓದಿನಿಂದ ಹುಟ್ಟಿಕೊಂಡ ಕೇವಲ ನನ್ನ ಅನಿಸಿಕೆಗಳಷ್ಟೆ. ●



ಎಸ್. ಮಾಲತಿ ನಿರ್ದೇಶನದ
'ವಾಸಂತಿ' ನಾಟಕದಲ್ಲಿ
ಎಸ್.ಮಾಲತಿ, ಜೆ. ಶ್ರೀನಿವಾಸಮೂರ್ತಿ

# ಇಬ್ಸನ್‌ನ 'ನೋರಾ' ನಂತರದ ಸ್ತ್ರೀ ಕೇಂದ್ರಿತ ಕನ್ನಡ ನಾಟಕಗಳು ಎಬ್ಬಿಸಿದ ಹೊಸ ಅಲೆಗಳು

■ ಎಸ್. ಮಾಲತಿ, ಸಾಗರ

*1879ರಲ್ಲಿ ಇಬ್ಸನ್ 'ಎ ಡಾಲ್ಸ್ ಹೌಸ್' ಬರೆದ. ಆ ಕಾಲದಲ್ಲಿ ಇದು ಮಹಾನ್ ಕ್ರಾಂತಿಕಾರಿ ನಾಟಕ. ಇಬ್ಸನ್ ನಾರ್ವೆಯವನು. ಈ ನಾಟಕದ ಮೊದಲ ಪ್ರದರ್ಶನವಾದಾಗ ಥಿಯೇಟರಿನಲ್ಲಿ ಜನ ದಂಗೆಯೆದ್ದಿದ್ದರು. ನಾಟಕದ ನಾಯಕಿ ನೋರಾ ಗಂಡನ ಹುಸಿ ದಾಂಪತ್ಯವನ್ನು ಧಿಕ್ಕರಿಸಿ, ಬಾಗಿಲು ಬಡೆದು ಹೊರನಡೆದಾಗ ಪ್ರೇಕ್ಷಕರು ಸಿಟ್ಟಿಗೆದ್ದು ಆಕೆಯನ್ನು ಮತ್ತೆ ಕರೆಸಿ, ಬಾಗಿಲು ತೆರೆಯಿಸಿ ಒಳಗೆ ನೂಕಿದರಂತೆ. ಹೇಗಿದೆ ಪುರುಷಾಹಂಕಾರ? ನೋರಾ ಬಾಗಿಲು ಬಡೆದ ಸದ್ದು ಇಡೀ ಯುರೋಪಿನಾದ್ಯಂತ ಪ್ರತಿಧ್ವನಿಸಿತು ಎಂಬ ವಿಮರ್ಶಕರ ಮಾತಿದೆ.*

*ಈ ನಾಟಕ 70ರ ದಶಕದಲ್ಲಿ ಕನ್ನಡಕ್ಕೆ ಅನುವಾದವಾಯಿತು. ರಾಮಕೃಷ್ಣ ಮೀರಾಮೂರ್ತಿ, ಎಸ್. ಮಾಲತಿ ಮತ್ತು ಜಮುನಾಪಾಣಿ ಈ ನಾಟಕವನ್ನು ಬೇರೆ ಬೇರೆ ಹೆಸರುಗಳಲ್ಲಿ ಅನುವಾದಿಸಿದ್ದಾರೆ. 70ರ ದಶಕ, ಕರ್ನಾಟಕದಲ್ಲಿ ಸ್ತ್ರೀವಾದಿ ಚಳವಳಿ ಶಕ್ತಿಯುತವಾಗಿ ಬೆಳೆಯುತ್ತಿದ್ದ ಕಾಲ. ಹಾಗಾಗಿಯೇ ಈ ನಾಟಕ ಬಹಳ ಚರ್ಚೆಗೆ ಗ್ರಾಸವಾಗಿ, ಮುಂದಿನ ಹಲವು ನಾಟಕಕಾರರನ್ನು ಪ್ರಭಾವಿಸಿದೆ.*

ಕನ್ನಡ ರಂಗಭೂಮಿ ಹಾಗೂ ಕನ್ನಡ ನಾಟಕ ಸಾಹಿತ್ಯಗಳಲ್ಲಿ ಸ್ತ್ರೀಪರ ಧೋರಣೆಯ, ಸ್ತ್ರೀಬಂಡಾಯದ ಆಶಯಗಳನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸಿದ ಮೊದಲ ನಾಟಕ ಇಬ್ಸನ್‌ನ 'ನೋರಾ' ಅಥವ 'ಗೊಂಬೆಮನೆ'. ಇಬ್ಸನ್‌ನ 'ಎ ಡಾಲ್ಸ್ ಹೌಸ್' ಎಂಬ ನಾಟಕವನ್ನು ಎಚ್.ಎ.ರಾಮಕೃಷ್ಣ ಅವರು 'ನೋರಾ' ಎಂಬುದಾಗಿಯೂ, ಮೀರಾ ಮೂರ್ತಿಯವರು 'ಗೊಂಬೆಮನೆ' ಎಂಬುದಾಗಿಯೂ ಅನುವಾದಿಸಿದ್ದಾರೆ. ಇನ್ನೂ ಪ್ರಕಟವಾಗದಿರುವ, ಆದರೆ ಪ್ರಯೋಗಗೊಂಡಿರುವ ಜಮುನಾಪಾಣಿ ಮತ್ತು ಎಸ್. ಮಾಲತಿ ಅಳವಡಿಸಿರುವ 'ವಾಸಂತಿ'ಯೂ ಲಭ್ಯವಿದೆ.

1985ರಲ್ಲಿ 'ವಾಸಂತಿ' ನಾಟಕವನ್ನು ನಾನು ನಿರ್ದೇಶಿಸಿ, ನೋರಾ(ವಾಸಂತಿ)ಳ ಪಾತ್ರವನ್ನೂ ಮಾಡಿದ್ದೆ. ಆಗಿನ ನನ್ನ ಅನುಭವ ಈ ಪ್ರಬಂಧಕ್ಕೆ ಪೂರಕವೆನ್ನಿಸುತ್ತಿರುವುದರಿಂದ ಅದನ್ನು ಬರೆಯುತ್ತಿದ್ದೇನೆ.

ವಾಸಂತಿ ನಾಟಕದಲ್ಲಿ ಸುಳ್ಳುಗಳ ಮೇಲೆ ಕಟ್ಟಿದ ದಾಂಪತ್ಯವನ್ನು ಧಿಕ್ಕರಿಸಿ, ವಾಸಂತಿ ಹೊರನಡೆಯುತ್ತಾಳೆ. ಇಬ್ಸನ್‌ನ 'ಎ ಡಾಲ್ಸ್ ಹೌಸ್'ನಲ್ಲಿ ನೋರಾ (ನಾಯಕಿ) ಹೊರನಡೆದಾಗ ಅವಳು ಬಾಗಿಲನ್ನು 'ಢಮಾರ್' ಎಂದು ಅಪ್ಪಳಿಸಿ ಹೊರನಡೆಯುತ್ತಾಳೆ. ಆದರೆ, 'ವಾಸಂತಿ'ಯಲ್ಲಿ ನಾನು 'ಮುಂದೇನೋ ಗೊತ್ತಿಲ್ಲ' ಎಂದು ನೋವಿನಿಂದಲೇ ಹೇಳಿದ್ದೆ. 'ದ ಡೋರ್ ಡಿಡ್ ನಾಟ್ ಬ್ಯಾಂಗ್' ಎಂಬ ವಿಮರ್ಶೆ ಕೇಳಿಬಂದಿತ್ತು.

ದಾಂಪತ್ಯ ಮುರಿದುಬಿದ್ದಾಗ ಹೆಣ್ಣಿಗೆ ಸಿಟ್ಟಿಗಿಂತ ಹೆಚ್ಚು ವೇದನೆಯಾಗಿರುತ್ತದೆ ಎಂದು ನನ್ನ ಅಭಿಪ್ರಾಯವಾಗಿತ್ತು. ಗಂಡು ಲೇಖಕನೊಬ್ಬ ಕ್ರಾಂತಿಕಾರಿ ಹೆಣ್ಣೊಬ್ಬಳನ್ನು ಕೆಂಡದ ಉಂಡೆ ಎಂಬಂತೆ ಚಿತ್ರಿಸಬಲ್ಲ. ಆದರೆ ಹೆಣ್ಣಿನ ಮೃದುಮನಸ್ಸಿಗೆ ಆಗುವ ಆಘಾತಗಳು ಅವನ ಅರಿವಿಗೆ ಬರುವುದಿಲ್ಲ. ದಾಂಪತ್ಯ ಮುರಿದುಬಿದ್ದಾಗ, ಮುಂದೇನು? ಎಂಬ ಪ್ರಶ್ನೆ ಗಾಢವಾಗಿ ಕಾಡುತ್ತದೆ. ಅದೂ ಅಲ್ಲದೆ ನೋರಾ ಆರ್ಥಿಕವಾಗಿ ಸ್ವತಂತ್ರಳಲ್ಲದ ಹೆಣ್ಣು. ಆಕೆ ಸುಳ್ಳು ದಾಂಪತ್ಯವನ್ನು ಧಿಕ್ಕರಿಸಿದಳು ಎಂಬ ಆಶಯವೇ ಕೊನೆಗೂ ಮುಖ್ಯವಾಗುತ್ತದೆ. ಈ ನಾಟಕ ಹಲವರಿಂದ ಚರ್ಚೆಗೆ ಒಳಗಾಗಿತ್ತು. ಈ ರೀತಿಯ ಚರ್ಚೆಯನ್ನು ಹುಟ್ಟುಹಾಕಿದ ಮೊದಲ ನಾಟಕವಿದು.

ಆನಂತರ ಎಚ್.ಎಸ್. ಶಿವಪ್ರಕಾಶರು ರಚಿಸಿದ 'ಕೆರೆಗೆ ಹಾರ' ನಾಟಕವನ್ನು ನಾನು ನಿರ್ದೇಶಿಸಿದೆ. ಇದು ಜನಪ್ರಿಯ ಜನಪದಗೀತೆಯೊಂದನ್ನು ಆಧರಿಸಿದ ನಾಟಕ. ಕಲ್ಲನಕೇರಿಯಲ್ಲಿ ಮಲ್ಲನಗೌಡರು ಕಟ್ಟಿಸಿದ ಕೆರೆಗೆ ನೀರು ಬರದಿದ್ದಾಗ, ಕಿರಿಸೊಸೆ ಭಾಗೀರಥಿಯನ್ನು ಕೆರೆಗೆ ಬಲಿಕೊಡಬೇಕೆಂದು ನಿರ್ಧರಿಸುತ್ತಾರೆ. ಭಾಗೀರಥಿಯ ಗಂಡ ಮಾದೇವರಾಯ ದಂಡಿಗೆ ಹೋಗಿರುತ್ತಾನೆ. ಭಾಗೀರಥಿ ತನ್ನ ಬಲಿಯನ್ನು ತಪ್ಪಿಸಬೇಕೆಂದು ಎಷ್ಟೆಲ್ಲ ಪ್ರಯತ್ನಪಟ್ಟರೂ ಸಾಧ್ಯವಾಗದೆ ಕೆರೆಗೆ ಬಲಿಯಾಗುತ್ತಾಳೆ. ದಂಡಿನಿಂದ ಹಿಂದಿರುಗಿದ ಮಾದೇವರಾಯ ಈ ವಿಷಯ ತಿಳಿದು, ತಾನೂ ಕೆರೆಗೆ ಹಾರಿ ಪ್ರಾಣಕಳೆದುಕೊಳ್ಳುತ್ತಾನೆ. ಇದೊಂದು ಸುಂದರ ಜನಪದ ಪ್ರೇಮಕಾವ್ಯ. ಆದರೆ, ಇದರ ನಾಟಕರೂಪದಲ್ಲಿ ಅಂತ್ಯ ಹೀಗಿರುವುದಿಲ್ಲ. ಇಡೀ ಸಮಾಜ, ಅತ್ತೆ-ಮಾವ ಎಲ್ಲರೂ ಸೇರಿ ಭಾಗೀರಥಿಯನ್ನು ಕೊಂದಿರುತ್ತಾರೆ. ದಂಡಿನಿಂದ ಬಂದ ಗಂಡ ಮಾದೇವರಾಯ, ತನ್ನ ಪತ್ನಿಯ ಅಗಲಿಕೆಯನ್ನು ತಾಳಲಾರದೆ ಕೆರೆಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳಲು ಹೋದರೆ, ಅವನ ತಂದೆ-ತಾಯಿ, ಊರಜನ ಅವನನ್ನು ತಡೆದು "ಭಾಗೀರಥಿ ಹೋದರೆ ಏನಾಯ್ತು? ನಿನಗೆ ಬೇರೆ ಹೆಣ್ಣು ತಂದು ಮದುವೆ ಮಾಡುತ್ತೇವೆ" ಎನ್ನುವಲ್ಲಿಗೆ ನಾಟಕ ಮುಗಿಯುತ್ತದೆ. ಪ್ರೇಮಕಾವ್ಯವನ್ನು ಹೀಗೇಕೆ ತಿರುಚಿದ್ದೇವೆ ಎಂದು ನಿಮಗನ್ನಿಸುತ್ತಿದೆಯೇ? ಹಾಗಲ್ಲ, ಒಂದು ಹೆಣ್ಣಿಗೆ ಬದುಕುವ ಹಕ್ಕೂ ಇಲ್ಲ... ಅವಳನ್ನು ಬೇಕಾದವರು ಬೇಕಾದಂತೆ ಮುಗಿಸಬಹುದು. ನಂತರ ಅವಳ ಗಂಡನಿಗೆ ಅಂತಹದೇ ಇನ್ನೊಂದು ಹೆಣ್ಣನ್ನು ತಂದು ಮದುವೆ ಮಾಡಲೂ ಬಹುದು. ಹೆಣ್ಣಿನ ಬದುಕಿನ ಅಸಹಾಯಕತೆಯನ್ನು ಬಿಂಬಿಸುವುದು ನಾಟಕದ ಆಶಯವಾಗಿತ್ತು.

ಆನಂತರ ನಾನು ಯೂರಿಪಿಡೀಸ್‌ನ ಗ್ರೀಕ್‌ನಾಟಕ 'ಮೀಡಿಯಾ' ವನ್ನು ನಿರ್ದೇಶಿಸಿದೆ. ಇದನ್ನು ಕೆ. ಮರುಳಸಿದ್ದಪ್ಪನವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಒಮ್ಮೆ 'ಸ್ಪಂದನ' ತಂಡಕ್ಕಾಗಿಯೂ, ಒಮ್ಮೆ ದೂರದರ್ಶನಕ್ಕಾಗಿಯೂ ನಾನು ಈ ನಾಟಕವನ್ನು ಎರಡು ಬಾರಿ ನಿರ್ದೇಶಿಸಿದೆ. ಈ ನಾಟಕದಲ್ಲಿ ತನ್ನ ತವರನ್ನು ಜೇಸನ್‌ಗಾಗಿ ತೊರೆದುಬಂದ ಮೀಡಿಯಾ ಜೇಸನ್‌ನನ್ನು ಮದುವೆಯಾಗಿ ಎರಡು ಮಕ್ಕಳನ್ನು ಪಡೆಯುತ್ತಾಳೆ. ಆನಂತರ ಜೇಸನ್, ಚಕ್ರಾಧಿಪತಿ ಕ್ರೆಯಾನ್‌ನ ಮಗಳಿಗೆ ಒಲಿಯುತ್ತಾನೆ. ಆಗ ಮಿಡಿಯಾಳ ಪ್ರೀತಿ, ದ್ವೇಷವಾಗಿ-ಸೇಡಾಗಿ ಪರಿಣಮಿಸಿ, ಆಕೆ ತನ್ನಿಬ್ಬರು ಮಕ್ಕಳನ್ನೂ ಕ್ರೆಯಾನ್‌ನ ಮಗಳನ್ನೂ ಕೊಂದು ಸೂರ್ಯದೇವನ ರಥದಲ್ಲಿ ಹೊರಟು ಹೋಗುತ್ತಾಳೆ. ನಾನು ಇದೇ ನಾಟಕವನ್ನು ಉರ್ದುವಿನಲ್ಲಿ-ದೆಹಲಿಯಲ್ಲಿ ನಿರ್ದೇಶಿಸಿದಾಗ, ಆಕೆ ಮರಳಿ ತವರಿಗೆ ಹೋಗುತ್ತಾಳೆ ಎಂಬ ಬದಲಾವಣೆ ಮಾಡಿ ಕೊಂಡಿದ್ದೆ. ಬೆಂಗಳೂರಿನಲ್ಲಿ 'ಸ್ಪಂದನ'ಕ್ಕಾಗಿ ಈ ನಾಟಕ ನಿರ್ದೇಶಿಸಿದಾಗ ಕೊನೆಯಲ್ಲಿ ಮೇಳ 'ತೋರಿಕೊಡಿ ನಮಗೊಂದು ಅನ್ಯಮಾರ್ಗ' ಎಂದು ಹಾಡುವಂತೆ ಮಾಡಿದ್ದೆ. ಇಲ್ಲಿನ ಮೇಳದಲ್ಲಿರುವವರೆಲ್ಲ ಹೆಂಗಸರೇ ಎಂಬುದನ್ನು ಗಮನಿಸಬೇಕು. ಇವರು ಪ್ರೀತಿಗೆ ಮೋಸವಾದಾಗ ಕೊಲೆ-ಸೇಡಿನಂತಹ ಮಾರ್ಗಗಳನ್ನು ತಮ್ಮದಾಗಿಸಿಕೊಳ್ಳದೆ ಅನ್ಯಮಾರ್ಗವನ್ನು ಹುಡುಕಿಕೊಳ್ಳಬೇಕು ಎಂಬುದು ನನ್ನ ಆಶಯವಾಗಿತ್ತು.

ಆನಂತರ, ತುಮರಿಯ 'ಅಭಿವ್ಯಕ್ತ' ಬಳಗಕ್ಕೆ ಭೀಷ್ಮಸಹಾನಿಯವರ 'ಮಾಧವಿ' ನಾಟಕವನ್ನು ನಿರ್ದೇಶಿಸಿದೆ. ಇಲ್ಲಿ ಮಾಧವಿ ಎಂಬ ಹೆಣ್ಣುಮಗಳನ್ನು ದಾನವಾಗಿ ಕೊಡುತ್ತಾರೆ. ಆಕೆ ಕೈಯಿಂದ ಕೈಗೆ ದಾನವಾಗುತ್ತ ಹೋಗಿ ದುರಂತವನ್ನು ತಲುಪುತ್ತಾಳೆ. ಈ ನಾಟಕದ ಅಂತ್ಯವನ್ನು ನಾನು ಆಕೆ ಎಲ್ಲರಿಂದ ತಪ್ಪಿಸಿಕೊಂಡು ಸಾಮಾನ್ಯ ಜನರ ನಡುವೆ ಹೋಗುತ್ತಾಳೆ ಎಂಬುದಾಗಿ ಬದಲಾಯಿಸಿದ್ದೆ.

ನಾನು ಮೇಲೆ ಹೇಳಿದ ನಾಟಕಗಳಷ್ಟೂ ಸ್ತ್ರೀಕೇಂದ್ರಿತ ನಾಟಕಗಳಾಗಿದ್ದು, ಸಾಕಷ್ಟು ಚರ್ಚೆಯನ್ನು ಹುಟ್ಟು ಹಾಕಿವೆ. ಆದ್ದರಿಂದಲೇ ಅವುಗಳ ಬಗ್ಗೆ ಸ್ವಲ್ಪ ವಿವರಗಳನ್ನು ಕೊಟ್ಟಿದ್ದೇನೆ.

ನಾನು ನಿರ್ದೇಶಿಸಿದ ಇನ್ನೊಂದು ಸ್ತ್ರೀಕೇಂದ್ರಿತ ನಾಟಕ 'ರೂಪಾಂತರ'. ಇದು ಜಯಪ್ರಕಾಶ ಮಾವಿನಕುಳಿಯವರು ರಚಿಸಿರುವ ನಾಟಕ. ಇದನ್ನು ನಾನು ಕಾರ್ಕಳದ ಭುವನೇಂದ್ರ ಕಾಲೇಜಿನ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಗಾಗಿ ನಿರ್ದೇಶಿಸಿದೆ. ಈ ನಾಟಕದಲ್ಲಿ - ಜಗತ್ತಿಗೆ ಬೆಳಕು ನೀಡಲುಹೊರಟ ಬುದ್ಧ ಮತ್ತು ಎಳೆಯಮಗ ರಾಹುಲನೊಂದಿಗೆ ಒಂಟಿಯಾಗಿ ಅಂತಃಪುರದಲ್ಲಿ ನೋವು ಅನುಭವಿಸುತ್ತಿರುವ ಯಶೋಧರೆಯರ ಸಂಘರ್ಷವಿದೆ. ಯೌವನದ ತನ್ನ ಕನಸುಗಳನ್ನೆಲ್ಲ ನುಚ್ಚು ನೂರಾಗಿಸಿದ ಬುದ್ಧನ ಮೋಕ್ಷದಾಹ ಅವಳಿಗೆ ಅತಿರೇಕವಾಗಿ ಕಾಣುತ್ತದೆ. ಕನಸುಗಳನ್ನು ಹೊತ್ತು ಸಿದ್ಧಾರ್ಥಯುವರಾಜನ ಹೆಂಡತಿಯಾಗಿ ಕಪಿಲವಸ್ತುವಿನ ಅರಮನೆಯಲ್ಲಿ ಕಾಲಿಟ್ಟ ಯಶೋಧರೆಗೆ ಬುದ್ಧ ಬೇಡವಾಗಿದ್ದಾನೆ, ತನ್ನ ಮಗುವಿಗೆ ತಂದೆಯಾಗಿದ್ದ ಸಿದ್ಧಾರ್ಥ ಬೇಕಾಗಿದ್ದಾನೆ. ಯಶೋಧರೆಯ ಎದೆ ಒಡೆಸಿ ಕೊನೆಗೂ ಬುದ್ಧ ಹೊರಟು ಹೋಗುವುದರಲ್ಲಿ ನಾಟಕ ಮುಕ್ತಾಯವಾಗುತ್ತದೆ. ಒಂಟಿಯಾಗಿ ಬೋಧಿವೃಕ್ಷದ ಕೆಳಗೆ ಕುಸಿಯುವ ಯಶೋಧರೆ ಹೆಣ್ಣಿನ ನೋವಿನ ಸಂಕೇತವಾಗುತ್ತಾಳೆ.

ಇದೇ ಸಂದರ್ಭದಲ್ಲಿ, ಡಾ. ಜಯಪ್ರಕಾಶ ಮಾವಿನ ಕುಳಿಯವರ ಇನ್ನೆರಡು ನಾಟಕಗಳಾದ 'ಮಹಾಯಾತ್ರೆ' ಮತ್ತು 'ಅಭಿಯಾನ'ಗಳ ಬಗ್ಗೆ ಹೇಳಬೇಕು.


'ಮೀಡಿಯಾ' ನಾಟಕದಲ್ಲಿ
ಲಕ್ಷ್ಮೀಚಂದ್ರಶೇಖರ್

'ಮಹಾಯಾತ್ರೆ' ನಾಟಕ ಸ್ತ್ರೀಪರವಾಗಿದ್ದರೂ ಇಲ್ಲಿ ಪುರುಷನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿಲ್ಲ. ಈ ನಾಟಕದಲ್ಲಿ ಸ್ವಾಮೀಜಿಯೊಬ್ಬನಿಂದ ಕಮಲಮ್ಮನ ಮೇಲೆ ಅತ್ಯಾಚಾರವಾಗುತ್ತದೆ. ಇದು ದೊಡ್ಡ ಸುದ್ದಿಯಾಗಿ ರಾಜಕಾರಣಿಗಳು, ಮಠದ ಭಕ್ತರು, ಮಾಧ್ಯಮದವರು, ಪೊಲೀಸರು ತಮತಮಗೆ ಬೇಕಾದ ಲಾಭ ಪಡೆಯುತ್ತಾರೆ. ಕೊನೆಯ ದೃಶ್ಯದಲ್ಲಿ ಸ್ವಾಮೀಜಿ 'ತಾನು ತಪ್ಪು ಮಾಡಿಲ್ಲ, ಅದು ಘಟಿಸಿದೆ' ಎನ್ನುತ್ತಾರೆ. ಈ ಇಡೀ ವ್ಯವಸ್ಥೆ ಹೇಗೆ ತಾನು ಚಿಕ್ಕವಯಸ್ಸಿನಲ್ಲಿದ್ದಾಗ, ತನ್ನನ್ನು ಬಲವಂತವಾಗಿ ಸ್ವಾಮಿಯನ್ನಾಗಿ ಮಾಡಿತು ಎಂಬುದನ್ನು ಹೇಳಿ ಕೊಳ್ಳುತ್ತಾನೆ. ಮನುಷ್ಯನ ಸ್ವಾಭಾವಿಕ ಗುಣವಾದ 'ಕಾಮ' ಅವನಿಂದ ಅತ್ಯಾಚಾರದಂತಹ ಕೆಲಸ ಮಾಡಿಸಿದೆ. ಅವನು ತನ್ನ ಗದ್ದುಗೆ ಬಿಡುತ್ತಾನೆ. ಇನ್ನೊಬ್ಬ ಮರಿಸ್ವಾಮಿಯನ್ನು ಮಠದವರು ಕರೆತರುತ್ತಾರೆ. ಹೀಗೆ ವ್ಯವಸ್ಥೆ ಮುಂದುವರಿಯುತ್ತದೆ. ಕೊನೆಯಲ್ಲಿ ಅತ್ಯಾಚಾರಕ್ಕೊಳಗಾದ ಕಮಲಮ್ಮ ತನ್ನ ಸ್ಥಿತಿಯನ್ನು ಹೇಳಿಕೊಳ್ಳುತ್ತಾಳೆ. ಬಡತನದಲ್ಲಿ ಬಳಲುತ್ತಿರುವ ಅವಳು ಗಂಡನಿಂದ ಮನೆಯ ಹೊರಗೆ ದೂಡಲ್ಪಡುತ್ತಾಳೆ. ಅವಳಿಗೆ ಮುಂದೇನು ಗತಿ? ಯಾವುದಕ್ಕೂ ಉತ್ತರವಿಲ್ಲ... ಹೆಣ್ಣಿನ ಸ್ಥಿತಿ ಅತಂತ್ರ.... ಹೀಗಿದೆ ನಾಟಕದ ಸಾರಾಂಶ.

ಜಯಪ್ರಕಾಶ ಮಾವಿನಕುಳಿಯವರ 'ಅಭಿಯಾನ' 2010ರಲ್ಲಿ ಪ್ರಕಟವಾದ ನಾಟಕ. ಈ ನಾಟಕದಲ್ಲಿಯೂ ಅವರು ತಮ್ಮ ಸ್ತ್ರೀಪರ ಧೋರಣೆಗಳನ್ನು ಮೆರೆದಿದ್ದಾರೆ. ಮಹಾಭಾರತದಲ್ಲಿ ಬರುವ ಅಂಬೆಯ ಪಾತ್ರ ಹಲವು ಕನ್ನಡ ನಾಟಕಗಳಿಗೆ, ಯಕ್ಷಗಾನ ಪ್ರಸಂಗಗಳಿಗೆ ವಸ್ತುವಾಗಿದೆ. 'ಅಭಿಯಾನ'ದಲ್ಲೂ ಮಾವಿನಕುಳಿಯವರು ಇದೇ ವಸ್ತುವನ್ನಿಟ್ಟುಕೊಂಡು ಅಂಬೆಯ ದುರಂತವನ್ನು ಮನಕಲಕುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಅಂಬೆ ಮತ್ತು ಭೀಷ್ಮರ ಪ್ರಸಂಗ ಹೆಣ್ಣು-ಗಂಡುಗಳ ಸಂಬಂಧವನ್ನು ವಿಶ್ಲೇಷಿಸುವ ಅಗತ್ಯವಾದ ನೆಲೆಯನ್ನು ಒದಗಿಸುತ್ತದೆ. ಮಾವಿನಕುಳಿಯವರು ಮಹಾಭಾರತದ ಮೂಲಕತೆಯಲ್ಲಿ ಯಾವ ಬದಲಾವಣೆಗಳನ್ನು ಮಾಡಿಕೊಳ್ಳದಿದ್ದರೂ ಪ್ರತಿಯೊಂದು ಪಾತ್ರದ ಒಳತೋಟಿ, ಆತಂಕ, ತವಕ, ತಲ್ಲಣಗಳನ್ನು ಚಿತ್ರಿಸುವಲ್ಲಿ ಪಾತ್ರಗಳಿಗೆ ಮೆರುಗು ನೀಡಿದ್ದಾರೆ.

ಪ್ರೀತಿಸಿ ಮೋಸ ಮಾಡಿದ ಸಾಲ್ವ, ಗೆದ್ದು-ವಿವಾಹವಾಗಲು ಒಪ್ಪದ ಭೀಷ್ಮ, ಹೀಗೆ ಎಲ್ಲೂ ನೆಲೆಕಾಣದೆ ಓಡಾಡುವ ಅಂಬೆ ರಾಜಕೀಯ ಕುಟಿಲತೆಗೆ ಬಲಿಯಾಗಿ ತನ್ನ ವ್ಯಕ್ತಿತ್ವ, ಕನಸು, ಪ್ರೀತಿ ಎಲ್ಲವನ್ನೂ ಬಲಿಕೊಡುತ್ತಾಳೆ. ಅಂತ್ಯದಲ್ಲಿ ಏಕಾಂಗಿಯಾಗಿ "ನಾನು ಏನು ತಪ್ಪು ಮಾಡಿದೆ ಎಂದು ಈ ಶಿಕ್ಷೆ? ನನ್ನ ಹೂವಿನ ಹಾಸಿಗೆಗೆ ಬೆಂಕಿ ಇಟ್ಟರು, ನನ್ನ ಬಾಳನ್ನು ಸುಟ್ಟರು. ನಾನು ಯಾಕೆ ಹೀಗಾದೆ? ನನ್ನ ತಂಗಿಯರು ಎಷ್ಟು ಸಂತಸದಿಂದಿದ್ದಾರೆ. ನನ್ನ ಹೆತ್ತ ತಂದೆಯ ಹತ್ತಿರ ಅಲವತ್ತುಗೊಂಡೆ, ಪ್ರೀತಿಸಿದ ಸಾಲ್ವನಲ್ಲಿ ಬೇಡಿಕೊಂಡೆ, ಗೆದ್ದ ಭೀಷ್ಮನಲ್ಲಿ ಅಂಗಲಾಚಿದೆ. ಈ ಕತ್ತಲೆ ಬೆಳಕಿನ ಆಟದಲ್ಲಿ ಪುರುಷರ ಪಗಡೆಯಾಟದ ಕಾಯಿ ನಾನು. ಎಲ್ಲ ಕಡೆ ಪುರುಷರೇ... ಹೇ ಪುರುಷಲೋಕವೇ..." ಎಂದು ತನ್ನ ದಾರುಣ ಸ್ಥಿತಿಗೆ ಮರುಗುವಲ್ಲಿ ನಾಟಕ ಮುಕ್ತಾಯವಾಗುತ್ತದೆ. ಅಂಬೆಯ ಈ ಅಭಿಯಾನ ಓದುಗರನ್ನು ತೀವ್ರವಾಗಿ ಚಿಂತಿಸುವಂತೆ ಮಾಡುತ್ತದೆ.




ಮಹಿಳಾ ರಂಗತರಬೇತಿಶಿಬಿರಕ್ಕಾಗಿಯೇ ಎಚ್.ಎಸ್. ಉಮೇಶ ರಚಿಸಿದ 'ಬಿಟ್ಟ ಪಯಣವ ಬಿಡದೆ' ಹಲವು ಸ್ತ್ರೀಪಾತ್ರಗಳಿರುವ, ಮಹಿಳೆಯರಿಗಾಗಿಯೇ ರಚನೆಯಾದ ಒಂದು ಮುಖ್ಯ ನಾಟಕ. ನಾಟಕ ಆರಂಭವಾಗುವುದು ಮಹಾಭಾರತದ ಕೇಂದ್ರಬಿಂದುವಾದ ಜೂಜಿನ ಹಿನ್ನೆಲೆಯಲ್ಲಿ. ಇಲ್ಲಿ ದ್ರೌಪದಿಯನ್ನೇ ಪಣವಾಗಿಟ್ಟ ಧರ್ಮರಾಯನ ಪುರುಷಾಹಂಕಾರದ ಎದುರು ದ್ರೌಪದಿ ಅಸಹಾಯಕಳಾಗಿದ್ದಷ್ಟೇ ಅಲ್ಲ, ಅವಳ ದಾಸಿಯರಾದ ಚಾರುಮತಿ, ಮಾಧವಿ ಮುಂತಾದವರು ತಮ್ಮಗತಿ ಏನೆಂದು ದಂಗಾಗಿ ಹೋಗುತ್ತಾರೆ. ಗಾಂಧಾರಿ ನೂರು ಮಕ್ಕಳನ್ನು ಹೆತ್ತರೂ ಹೊರಸಂಬಂಧಗಳನ್ನು ಪಡೆದಿರುವ ಧೃತರಾಷ್ಟ್ರನ ಚಿತ್ರಣವಿದೆ ಇಲ್ಲಿ. ಅಂತಹ ಒಂದು ಸಂಬಂಧದಲ್ಲಿ ಚಿತ್ತೆಗೆ ಹುಟ್ಟಿದ ಸುಮತಿ, ಇವರಿಬ್ಬರ ದಾರುಣ ಬದುಕಿನ ಚಿತ್ರಣವಿದೆ. ಧರ್ಮರಾಜನನ್ನು ನೆರಳಾಗಿ ಅನುಸರಿಸಿ ಅವನನ್ನು ಪಡೆಯುವಲ್ಲಿ ಸೋಲುವ ಜ್ಯೋತಿಷ್ಮತಿಯ ಚಿತ್ರಣವೂ ಇದೆ. ಇಚ್ಛಾ ಕುರುಡಿಯಾದ ಗಾಂಧಾರಿಯ ಒಳತೋಟಿಗಳು, ದ್ರೌಪದಿಯ ತಾಕಲಾಟಗಳು, ದಾಸಿಯರ ಒಳನೋವುಗಳು-ಹೀಗೆ ರಾಜಷಾಹಿಯಲ್ಲಿ ನಲುಗಿ ಹೋಗುವ ಭಾವಲೋಕ, ಜರ್ಝರಿತವಾಗುವ ಹೆಣ್ಣುತನ, ಕನಸುಗಳಿಲ್ಲದ ಕತ್ತಲೆಯದಾರಿ ಎಲ್ಲವೂ ಇಲ್ಲಿ ಅನಾವರಣ ಗೊಳ್ಳುತ್ತವೆ.

ಬಿ. ಸುರೇಶ ಅವರ 'ಗಿರಿಜಾ ಕಲ್ಯಾಣ'ದಲ್ಲಿ ಗಿರಿಜೆಯ ಪಾತ್ರವೇ ಮುಖ್ಯವಾಗಿದ್ದರೂ, ಆಕೆಯ ದುರಂತವೇ ಮುಖ್ಯವಾಗಿದ್ದರೂ ಅದರ ಮೂಲಕ ತೆರೆದುಕೊಳ್ಳುವ ಜಾಗತೀಕರಣದ ಆಧುನಿಕಲೋಕದ ಕ್ರೌರ್ಯ ಮುಖ್ಯವಾಗುತ್ತದೆ. ಆರ್ಥಿಕ ಸಂಕಷ್ಟಗಳಿಂದ ರೈತರ ಆತ್ಮಹತ್ಯೆ ಇಂದಿನ ಪ್ರಮುಖ ಸಮಸ್ಯೆ. ಕನಸುಗಳನ್ನು ಹೊತ್ತ, ಎಲ್ಲ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕಬಲ್ಲ ಶಕ್ತಿಯಿರುವ ಗಿರಿಜೆ ಮತ್ತು ಅವಳ ಗಂಡ ಆರ್ಥಿಕ ಜಾಲದಲ್ಲಿ ಬಸವಳಿದರು. ಗಿರಿಜೆಯ ಗಂಡ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಅಂತ್ಯದಲ್ಲಿ "ನಾವು ಕಳ್ದೋಗಿದೀವಿ... ಎಲ್ಲಿ? ಯಾವಾಗ? ಎಂಗ್ ಕಳ್ದೋದ್ವಿ? ಅಂತ ತಿಳ್ಯೋ ಒತ್ಗೆ ಯಾವ್ದೂ ಕೈಯಿಗ್ ಸಿಗಾದಿಲ್ಲ, ಯವ್ವಾ! ಯಾವ್ದೂ ಸಿಗಾದಿಲ್ಲ" ಎಂದು ಗಿರಿಜೆ ಹಲುಬುವಾಗ, 'ಯಾವ್ದೂ ತಿಳಿಯೋದಿಲ್ಲ' ಎಂಬುದು ಪ್ರೇಕ್ಷಕನ ಹಲುಬುವಿಕೆಯೂ ಆಗುತ್ತದೆ.

2004ರಲ್ಲಿ ಪ್ರಕಟವಾದ ಎಚ್.ಎಲ್. ಪುಷ್ಪ ಅವರ 'ಭೂಮಿಯಲ್ಲ ಇವಳು' ನಾಟಕದ ಕೇಂದ್ರವ್ಯಕ್ತಿಯೇ ಅಮೃತಮತಿ. ಜನ್ನನ 'ಯಶೋಧರಚರಿತೆ'ಯ ಅಮೃತಮತಿಯ ಪಾತ್ರವನ್ನು ಈ ನಾಟಕದಲ್ಲಿ ಇನ್ನಷ್ಟು ಆಳವಾಗಿ ಶೋಧಿಸಲಾಗಿದೆ. ಮೂಲಕಾವ್ಯದಲ್ಲಿ ಯಶೋಧರನಿಗೆ ವೈರಾಗ್ಯ ಬರಲು, ಅಮೃತಮತಿಯ ಹಾದರವನ್ನು ಸೃಷ್ಟಿಸಲಾಗಿದೆ. ಆದರೆ, ಎಚ್.ಎಲ್. ಪುಷ್ಪ ಅವರು, ಅಮೃತಮತಿ ಅರಮನೆಯ ಬದಗ ಅಷ್ಟಾವಂಕನೊಡನೆ ದೈಹಿಕ ಸಂಬಂಧ ಸಾಧಿಸಿದ್ದು, ಅವನ ಗಾನಕ್ಕೆ ಮನಸೋತಿದ್ದು ಅಮೃತಮತಿಯ ಆತ್ಮದಕರೆ ಎಂಬಂತೆ ಚಿತ್ರಿಸಿದ್ದಾರೆ. ಅರಮನೆ, ಸುಖ-ಸೌಕರ್ಯ, ಸುಂದರನಾದ ಪತಿ ಯಶೋಧರ ಇದ್ದರೂ ಅಮೃತಮತಿ ಅತೃಪ್ತೆ. ಒಂದು ನಡುರಾತ್ರಿಯಲ್ಲಿ ಅರಮನೆಯ ಮಾವುತ

ಅಷ್ಟಾವಂಕನ ಗಾನವನ್ನು ಕೇಳಿದ್ದೇ ಅಮೃತಮತಿಯ ಹೃದಯದಲ್ಲಿ ಸಂಚಲನ ಉಂಟಾಗುತ್ತದೆ. ಅವಳು ಅಷ್ಟಾವಂಕನಿಗೆ ಒಲಿಯುತ್ತಾಳೆ.

ಜೈನತತ್ವದ ಹಿನ್ನೆಲೆಯಲ್ಲಿ ಆಧುನಿಕ ಬದುಕನ್ನು ಮುಖಾಮುಖಿಯಾಗಿಸುವ ಪ್ರಯತ್ನ ಈ ನಾಟಕದಲ್ಲಿ ನಡೆದಿದೆ. ಮೊದಲ ದೃಶ್ಯದಲ್ಲಿ ಬದಗ ಮತ್ತು ಅಮೃತಮತಿ ಊಟ ಮಾಡುತ್ತ ಕುಳಿತಿದ್ದಾರೆ. ಆಗ ಎರಡು ಎಳೆಯ ಮಕ್ಕಳು ಭಿಕ್ಷೆ ಕೇಳಲು ಬರುತ್ತಾರೆ. ಅವರೇ ಜನ್ಮಾಂತರಗಳನ್ನು ಸುತ್ತಿ ಈಗ ಮನುಷ್ಯರಾಗಿ ಜನ್ಮ ತಾಳಿರುವ ಅಮೃತಮತಿಯ ಗಂಡ ಮತ್ತು ಅತ್ತೆ. ಈಗ, ಅವರು ಅಣ್ಣ ಮತ್ತು ತಂಗಿ. ಎರಡನೇ ದೃಶ್ಯದಲ್ಲಿ ಈ ಅಣ್ಣ-ತಂಗಿಯರು ಕೊಳೆಗೇರಿಗೆ ಬರುತ್ತಾರೆ. ಅಲ್ಲಿರುವ ಅಜ್ಜಿಗೆ ತಾವು ಏಳು ಜನ್ಮಗಳಲ್ಲಿ ನವಿಲು-ನಾಯಿ, ಆಡು-ಕೋಳಿ, ಮೀನು ಮುಂತಾಗಿ ಜನ್ಮತಾಳಿ ಈಗ ಸೊಸೆ ಕುಸುಮಾವಳಿಯಲ್ಲಿ ಅವಳಿ ಮಕ್ಕಳಾಗಿ ಹುಟ್ಟಿರುವುದಾಗಿ ತಿಳಿಸುತ್ತಾರೆ. ಮೊದಲ ಈ ಎರಡೂ ದೃಶ್ಯಗಳು ನಾಟಕಕ್ಕೆ ಪೀಠಿಕೆಯಂತಿವೆ. ಮೂರನೆಯ ದೃಶ್ಯ ಕೊಳೆಗೇರಿಯಲ್ಲಿ ನಡೆಯುತ್ತದೆ. ಅಲ್ಲಿರುವ ದಾಸಿ ಮಾದೇವಿ, ವೇಶ್ಯೆಯರು, ಅಜ್ಜಿ ಇವರ ಮಾತುಗಳಲ್ಲಿ ಅಮೃತಮತಿ ನುಸುಳುತ್ತಾಳೆ. ಮುಂದೆ, ನಾಟಕವು ಪೀಠಿಕಾ ದೃಶ್ಯಗಳಿಂದ ಹೊರಳಿ, ಫ್ಲ್ಯಾಶ್‌ಬ್ಯಾಕ್ ತಂತ್ರದ ಮೂಲಕ ಅಮೃತಮತಿ-ಯಶೋಧರೆಯರ ಕಥೆಯತ್ತ ಸಾಗುತ್ತದೆ. ಕೊಳೆಗೇರಿಯ ಹುಡುಗಿಯೊಬ್ಬಳು (ಆಕೆ ವೇಶ್ಯೆ) ಗಾಯಕನಿಗೆ ಮರುಳಾದಳು ಎಂದು ಹೇಳುವಲ್ಲಿ, ಅಮೃತಮತಿಯನ್ನು ವೇಶ್ಯೆಯೊಡನೆ ಸಮೀಕರಿಸುವ ಪ್ರಯತ್ನವಿದೆ. ಅಮೃತಮತಿ ಬದಗನೊಡನೆ ದೈಹಿಕ ಸಂಬಂಧ ಹೊಂದಿರುವುದು ರಾಜ ಯಶೋಧರನಿಗೆ ತಿಳಿದಾಗಲೂ ಅವನು ಭಾವಾವೇಶಕ್ಕೆ ಒಳಗಾಗುವುದಿಲ್ಲ. ರಾಜಮಾತೆಗೂ ಈ ವಿಷಯ ತಿಳಿಯುವುದು. ಮಗ-ತಾಯಿ ಇಬ್ಬರೂ ತಾವು ಕಂಡ ಕೆಟ್ಟ ಕನಸಿನ ಬಗ್ಗೆ ಚರ್ಚಿಸುತ್ತ, ಅದರ ಪರಿಹಾರಕ್ಕಾಗಿ ಹಿಟ್ಟಿನಹುಂಜ ಬಲಿಕೊಡುವುದೆಂದು ನಿರ್ಧರಿಸುವರು. ಅಮೃತಮತಿಗೆ, ರಾಜಮಾತೆ ಗದರಿ ಬುದ್ಧಿ ಹೇಳಿದಾಗ, ಆಕೆ ತನ್ನ ಹಠವನ್ನು ಬಿಡಲಾರೆ ಎನ್ನುವಳು. ರಾಜ-ರಾಜಮಾತೆ ಹಿಟ್ಟಿನಹುಂಜ ಬಲಿಗೊಟ್ಟಾಗ ಅದಕ್ಕೆ ಜೀವ ಬಂದು ಕೊ ಕ್ಕೊ ಕೋ ಎಂದು ಕೂಗುವುದು. ಪ್ರಾಣಿಹಿಂಸೆಯಿಂದ ವೈರಾಗ್ಯ ಬಂದ ರಾಜ ದೇಶಾಟನೆಗೆ ಹೊರಡುವನು. ದೇಶಾಟನೆಗೆ ಹೊರಟ ಯಶೋಧರನನ್ನು ಅಮೃತಮತಿ ವಿಷದ ಲಡ್ಡುಗೆ ತಿನ್ನಿಸಿ ಕೊಲ್ಲುತ್ತಾಳೆ. ತನ್ನ ಪ್ರಿಯಕರ ಬದಗನೊಂದಿಗೆ ರಾಜ್ಯವಾಳುತ್ತಾಳೆ.

ಈ ನಾಟಕದಲ್ಲಿ ತನ್ನ ಅತೃಪ್ತಿಯ ವಿರುದ್ಧ ಸಿಡಿದೆದ್ದು ತನಗೆ ಬೇಕಾದ್ದನ್ನು ಆರಿಸಿಕೊಳ್ಳುವ ಹೆಣ್ಣಿನ ಛಲದ ಅನಾವರಣವಾಗಿದ್ದರೂ, ಆಕೆ ವಿಷ ತಿನ್ನಿಸುವಂತಹ ಹೇಯಕೃತ್ಯಕ್ಕೆ ಇಳಿದದ್ದು ಎಷ್ಟು ಸಮಂಜಸ? ಎಂಬ ಪ್ರಶ್ನೆ ಈ ನಾಟಕವನ್ನು ಸ್ತ್ರೀಕೇಂದ್ರಿತ ನೆಲೆಯ ಆರೋಗ್ಯಪೂರ್ಣ ನಾಟಕ ಎಂದು ಕರೆಯುವಲ್ಲಿ ಅಳುಕು ಉಂಟುಮಾಡುತ್ತದೆ.

ಡಿ.ಎಸ್. ಚೌಗಲೆಯವರ 'ಕಸ್ತೂರಬಾ' ನಾಟಕ ಕನ್ನಡ ರಂಗಭೂಮಿಯಲ್ಲಿ ಸಂಚಲನ ಉಂಟುಮಾಡಿದಂತಹ ನಾಟಕ. ಜೈಲಿನ ಖೈದಿಗಳಿಂದ, ಹುಲಗಪ್ಪ ಕಟ್ಟೀಮನಿಯವರು ಈ ನಾಟಕವನ್ನಾಡಿಸಿ ಯಶಸ್ವಿಯಾದದ್ದೂ ಇದಕ್ಕೊಂದು ಕಾರಣ. ಇಡೀ ನಾಟಕವನ್ನು ಕಸ್ತೂರಬಾಳ ಬದುಕಿನ ಸುತ್ತ ಹೆಣೆಯಲಾಗಿದೆ. ಒಂದನೇ ದೃಶ್ಯದಲ್ಲಿ ಗಾಂಧಿಯ ಮಾತುಗಳೊಂದಿಗೆ ನಾಟಕ ಆರಂಭವಾಗುತ್ತದೆ.

**"ಅರಿವೆನೆಡೆ ಸಾಗುವ ಪಯಣದಲಿ ಸತ್ಯದ ಕೆಂಡಗಳ ಹಿಡಿದು ನನ್ನ ಹೆಜ್ಜೆಗಳ ಅನುಸರಿಸಿ ಬಂದಳು. ಕತ್ತಲೆ ಬೆಳಕಿನಾಟಗಳಲ್ಲಿ ಅವಳ ಪ್ರಜ್ಞೆ ನಿರಂತರ ಸಹಾಯಕ್ಕೆಬಂತು. ಸೇವೆ ಮತ್ತು ಸ್ವಾತಂತ್ರ್ಯಗಳ ನಂಟು ಬಿಡದೆ ನಾನು ಕೊಟ್ಟ ಎಲ್ಲ ಕಷ್ಟ-ಶಿಕ್ಷೆಗಳನ್ನು ಸಂಯಮದಿ ಅನಭವಿಸಿದಳು. ನನ್ನ ಬ್ರಹ್ಮಚರ್ಯ ಪ್ರಯೋಗಕ್ಕೆ ಅವಳು ನೀಡಿದ ಪ್ರತಿಕ್ರಿಯೆ ಒಂದರೆಕ್ಷಣ ನನ್ನ ದಂಗು ಬಡಿಸಿತು. ನಿರ್ಧಾರದಲಿ ಗಟ್ಟಿಗಳು. ಆಫ್ರಿಕಾದಲ್ಲಿ ಅರವಳಿಕೆಯಿಲ್ಲದೆಯೇ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡಾಕೆಗೆ ಇಂದ್ರಿಯನಿಗ್ರಹ ಸುಲಭದ ಮಾತು... ಅವಳಿಲ್ಲದ ನನ್ನನ್ನು ಕಲ್ಪಿಸಿಕೊಳ್ಳುವುದು ಅಂದರೆ ಅದು ಅತ್ಯಂತ ಅಸ್ವಾಭಾವಿಕವಾದುದಾಗುತ್ತದೆ. ಆ ನನ್ನ ಕಸ್ತೂರ ಖರೇ ಅರ್ಥದಲ್ಲಿ ನನ್ನೊಳಗಿನ ಆತ್ಮದ ಬೆಳಗು, ಸಂಗಾತಿ, ಅವಿಭಾಜ್ಯ ಅಂಗ, ಮತ್ತೆ ಒಂದು ದಿವ್ಯ ಶಕ್ತಿ."**

ಗಾಂಧಿಯ ಈ ಮಾತುಗಳೇ ಸಾಕು, ಕಸ್ತೂರಬಾಳ ನಿಜ ವ್ಯಕ್ತಿತ್ವವನ್ನರಿಯಲು. ಇಂಥಹ ಕಸ್ತೂರಬಾ ಳ ಜೀವನ ಸುಖದ ಸುಪ್ಪತ್ತಿಗೆಯಾಗಿರಲಿಲ್ಲ, ಕಠಿಣ ವ್ರತಗಳ ಅಗ್ನಿಪರೀಕ್ಷೆಯಾಗಿತ್ತು.

ಈ ನಾಟಕದಲ್ಲಿ, ರಾಜಕೋಟದ ಕೂಡು ಕುಟುಂಬಕ್ಕೆ ಹನ್ನೆರಡು ವರ್ಷಕ್ಕೇ ಮದುವೆಯಾಗಿ ಬಂದ ಕಸ್ತೂರಳ ಪರಿಶ್ರಮದ ದುಡಿಮೆಯ ಚಿತ್ರಣವಿದೆ. ಮನೆಯ ಹೊರಗೆ ಹೋಗಬಾರದು, ಗುಡಿಗೆ ಹೋಗಬಾರದು ಎನ್ನುವ ಗಾಂಧಿಯ ಅನುಮಾನದ ಕಣ್ಣುಗಳ ನಿರ್ಬಂಧವಿದೆ. ಆದರೆ, ಗಾಂಧಿ ವಿದೇಶವ್ಯಾಸಂಗಕ್ಕೆ ಹೊರಟಾಗ ತನ್ನೆಲ್ಲಾ ಆಭರಣಗಳನ್ನು ವ್ಯಾಸಂಗದ ಖರ್ಚಿಗಾಗಿ ಕೊಡುವ ತ್ಯಾಗಮಯಿ ಕಸ್ತೂರಬಾ. ದಕ್ಷಿಣ ಆಫ್ರಿಕಾದಲ್ಲಿ ಅವಮಾನಿತನಾದ ಗಾಂಧಿ ವರ್ಣದ್ವೇಷದ ವಿರುದ್ಧ ಹೋರಾಟ ಮಾಡಲು ನಿರ್ಧರಿಸಿದಾಗ, ಅವರ ಜೊತೆ ಜೊತೆಯಾಗಿ ನಿಂತು ಹೋರಾಡಿದವಳು ಕಸ್ತೂರಬಾ. ಗಾಂಧಿಯ ಆಶ್ರಮದಲ್ಲಿ ಮಲಹೊರುವುದರ ಬಗ್ಗೆ ಕಸ್ತೂರಬಾ ಒಮ್ಮೆ ಅಸಹನೆ ತೋರಿಸಿದಾಗ, ಗಾಂಧೀಜಿ ಆಕೆಯನ್ನು ಹೊರದಬ್ಬಿ ಬಾಗಿಲು ಹಾಕಿಕೊಳ್ಳುತ್ತಾರೆ. ಬಾಗಿಲ ಹೊರಗೆ ನಿಂತು ಈ ಅಪರಿಚಿತ ಜಾಗದಲ್ಲಿ ನಾನೆಲ್ಲಿಗೆ ಹೋಗಲಿ ಎಂದು ಬಿಕ್ಕಳಿಸುವ ಕಸ್ತೂರಬಾಳ ಚಿತ್ರ ನಮ್ಮಲ್ಲಿ ಮರುಕ ಉಂಟುಮಾಡುವುದಲ್ಲದೆ, ಮಹಾತ್ಮರ 'ಮಹಾತ್ಮೆ'ಯ ಬಗ್ಗೆ ಪ್ರಶ್ನೆ ಏಳುವಂತೆ ಮಾಡುತ್ತದೆ. ಆದರೆ ಕರ್ತವ್ಯ ಶೀಲ, ಕಾಯಕನಿಷ್ಠೆಯ, ಕಷ್ಟಸಹಿಷ್ಣುವಾದ ಕಸ್ತೂರಬಾ ನಾಟಕದುದ್ದಕ್ಕೂ ಕಂಗೊಳಿಸುತ್ತಾಳೆ. ಹೊರದೇಶದಲ್ಲಿ ಗಾಂಧಿಯವರ ಮೌಲ್ಯಗಳಿಗಾಗಿ ಹೋರಾಡಿ ಜೈಲು ಕಂಡ ಮೊದಲ ಮಹಿಳೆ ಕಸ್ತೂರ. ತಂದೆ ಗಾಂಧಿ ಮಕ್ಕಳಿಗಾಗಿ ಏನನ್ನೂ ಮಾಡುವುದಿಲ್ಲ. ಕಸ್ತೂರಬಾಳ ತಾಯಿಹೃದಯ ಮಕ್ಕಳಿಗಾಗಿ ಮರುಗಿ ಅಳುತ್ತದೆ. ಗಾಂಧೀಜಿಯವರಂತೆಯೇ ಕಸ್ತೂರ ಉಪ್ಪು, ಬೇಳೆ ತ್ಯಜಿಸುವಳು, ಉಪವಾಸ ಮಾಡುವಳು, ವಿದೇಶಿ ಬಟ್ಟೆಗಳ ನಿರಾಕರಣೆ ಮಾಡುವಳು. ಅಸ್ಪೃಶ್ಯರಾಗಿದ್ದ ಮಣಿಭಾಯಿ ಮತ್ತು ಖಂಡೂರನ್ನು ತಮ್ಮೊಂದಿಗೆ ಅಡುಗೆ ಮನೆಯ ಕೆಲಸದಲ್ಲಿ ತೊಡಗಿಸಿಕೊಂಡ ಕಸ್ತೂರಬಾ ವಿಶಾಲ ಹೃದಯಿ.ಸೊಸೆ ಗುಲಾಬಳ ಮರಣ, ಸಾಲಗಾರನಾಗಿದ್ದ ಹರಿಲಾಲ, ಕುಡುಕನಾಗಿದ್ದ ಹರಿಲಾಲ, ದಿಕ್ಕೆಟ್ಟ ಹರಿಲಾಲ ಇವೆಲ್ಲ ಕಸ್ತೂರಬಾಳನ್ನು ಇನ್ನಿಲ್ಲದ ಶೋಕಸಾಗರದಲ್ಲಿ ಮುಳುಗಿಸುತ್ತವೆ. ಕೊನೆಗೂ ಜೈಲಿನಲ್ಲಿ ಬಂಧಿಯಾಗಿಯೇ ಕಸ್ತೂರಬಾ ಕೊನೆಯುಸಿರೆಳೆಯುತ್ತಾಳೆ.

ಗಾಂಧೀಜಿಯ ಮಹಾನ್ ವ್ಯಕ್ತಿತ್ವಕ್ಕೆ ಆಸರೆಯಾಗಿ ಬಾಳಿದ ಕಸ್ತೂರಬಾಳ ಮಹೋನ್ನತಿಯೇನೂ ಕಡಿಮೆಯದಲ್ಲ. ಆದರೆ, ಆಕೆಯ ಜೀವನ ಮುಳ್ಳಿನದಾರಿಯಾಗಿತ್ತು. ಹೀಗೆ, ಈ ನಾಟಕ ಸಾಧ್ವಿಯೊಬ್ಬಳ ಆದರ್ಶ ಜೀವನವನ್ನು ಚಿತ್ರಿಸುತ್ತದೆ.

ಡಾ. ಎಸ್.ವಿ. ಪ್ರಭಾವತಿಯವರ 'ಪಾಂಚಾಲಿಯ ಸ್ವಗತ' ಮತ್ತು 'ಸ್ವಗತಗಳು' - ಎರಡು ಮುಖ್ಯ ಸ್ತ್ರೀವಾದಿ ನಾಟಕಗಳು. 'ಪಾಂಚಾಲಿಯ ಸ್ವಗತ' ಏಕವ್ಯಕ್ತಿ ನಾಟಕದಲ್ಲಿ ದ್ರೌಪದಿಯ ಬಾಯಿಂದ ಇಡೀ ಮಹಾಭಾರತದ ಕಥೆಯನ್ನು ಹೇಳಿಸಲಾಗಿದೆ. ಆದ್ದರಿಂದ, ದ್ರೌಪದಿಯ

ಮನದಳಲಿಗೆ ಒತ್ತು ಬೀಳಬೇಕಾದ ಕಡೆ ಬಿದ್ದಿಲ್ಲ. ದ್ರೌಪದಿ, ಇಲ್ಲಿ ಇಡೀ ಮಹಾಭಾರತದ ಕಥೆಯನ್ನು ಹೇಳುವ ನಿರೂಪಕಿಯಾಗಿ ಕಾಣಿಸುತ್ತಾಳೆಯೇ ಹೊರತು ರಕ್ತಮಾಂಸ ತುಂಬಿದ ಹೆಣ್ಣಾಗಿ, ಅವಮಾನಿತ ಪತ್ನಿಯಾಗಿ, ಮಕ್ಕಳನ್ನು ಕಳೆದುಕೊಂಡ ತಾಯಾಗಿ ಜೀವತುಂಬಿ ನಿಲ್ಲುವುದಿಲ್ಲ. ಇದಕ್ಕೆ ಕಾರಣ, ಬಳಸಿರುವ ತೊಡಕಾದ ಭಾಷೆ ಮತ್ತು ಇಡೀ ಕಥೆಯನ್ನು ಹೇಳಬೇಕೆನ್ನುವ ಲೇಖಕಿಯ ಆಶಯ. ದ್ರೌಪದಿಯ ಜೀವನದ ಮುಖ್ಯ ಘಟ್ಟಗಳನ್ನು ಲಂಬಿಸಬೇಕಿತ್ತು. ಲೇಖಕಿ ದ್ರೌಪದಿಯಿಂದ ದುಶ್ಶಾಸನನನ್ನು ಥಳಿಸುವಂತೆ ಮತ್ತು ಕೊನೆಯಲ್ಲಿ ನಿರುಪದ್ರವಿಗಳಾಗಿದ್ದ ನಕುಲ, ಸಹದೇವರೊಂದಿಗೆ ದ್ರೌಪದಿ ಮುನ್ನಡೆದಳು ಎಂಬಲ್ಲಿಗೆ ನಾಟಕವನ್ನು ಮುಗಿಸಿದ್ದಾರೆ.

ಡಾ. ಎಸ್.ವಿ. ಪ್ರಭಾವತಿಯವರ, ಕೇವಲ 30 ನಿಮಿಷಗಳ ಕಿರುನಾಟಕ 'ಸ್ವಗತಗಳು'ನಲ್ಲಿ ಅಹಲ್ಯಾ, ಸೀತಾ,* ದ್ರೌಪದಿ, ತಾರಾ, ಮಂಡೋದರಿಯರ ಒಳಮನಸ್ಸು ಅನಾವರಣಗೊಳ್ಳುತ್ತದೆ. ಈ ಪಂಚಕನ್ಯೆಯರ ಹೆಸರಿನವರೇ ಆದ ಐದು ಆಧುನಿಕ ಹೆಂಗಸರು ಮಾತಿಗಾರಂಭಿಸುತ್ತಾರೆ. ಫ್ಲಾಶ್‌ಬ್ಯಾಕ್‌ನಲ್ಲಿ ಪೌರಾಣಿಕ ಕಥೆಗಳು ಬಿಚ್ಚಿಕೊಳ್ಳುವುವು. ಅಂದಿನ, ಇಂದಿನ ಎಲ್ಲ ಸ್ತ್ರೀಯರ ಸ್ಥಿತಿಯೂ ಒಂದೇ ಎಂಬ ಧ್ವನಿ ಧ್ವನಿಸುತ್ತದೆ. ಅಂದೂ ಸ್ವಾತಂತ್ರ್ಯವಿರಲಿಲ್ಲ, ಇಂದೂ ಇಲ್ಲ– ಮಹಿಳೆಯರಿಗೆ ಎಂದೆಂದಿಗೂ ಸ್ವಗತವೇ ಗತಿ–ಎಂಬ ಸೂತ್ರಧಾರನ ಮಾತಿನಲ್ಲಿ ನಾಟಕ ಮುಗಿಯುತ್ತದೆ.

### ಏಕ ಸ್ತ್ರೀ ನಾಟಕಗಳು

ಇತ್ತೀಚಿನ ದಿನಗಳಲ್ಲಿ ಏಕಸ್ತ್ರೀ ನಾಟಕಗಳು ಹೆಚ್ಚು ಜನಪ್ರಿಯ ವಾಗುತ್ತಿವೆ. ಭಾಗೀರಥಿ ಕದಂ, ಲಕ್ಷ್ಮೀಚಂದ್ರಶೇಖರ್, ಅರುಂಧತಿನಾಗ್, ಬಿ. ಜಯಶ್ರೀ, ಎನ್. ಮಂಗಳಾ, ಬಿ.ಎನ್. ಶಶಿಕಲಾ ಮುಂತಾದವರು ಏಕಸ್ತ್ರೀ ಪ್ರದರ್ಶನಗಳನ್ನು ನೀಡಿ ಪ್ರಸಿದ್ಧರಾಗಿದ್ದಾರೆ.

ಈ ಏಕವ್ಯಕ್ತಿ ಪ್ರದರ್ಶನಗಳನ್ನು ನಾನೇ ಒಮ್ಮೆ 'ರಂಗಭೂಮಿಯ ಅಂಗವಿಕಲ ಕೂಸು' ಎಂದು ಕರೆದಿದ್ದೆ. ಆದರೆ, ಏಕಸ್ತ್ರೀ ಪ್ರದರ್ಶನಗಳನ್ನು ಬೇರೆಯೇ ದೃಷ್ಟಿಯಲ್ಲಿ ನೋಡಬೇಕಾಗುತ್ತದೆ ಎಂದೆನ್ನಿಸಿತು. ಮನೆಯ ಜವಾಬ್ದಾರಿಯಿಂದ ದಿನವೂ ರಿಹರ್ಸಲ್‌ಗೆ ಬರಲಾಗದ, ಸಮೂಹ ನಾಟಕದಲ್ಲಿ ತಮಗೆ ಪೂರ್ಣ ಅಭಿವ್ಯಕ್ತಿ ಸಾಧ್ಯವಿಲ್ಲವೆಂದು ಅನ್ನಿಸುವ, ಆದರೆ ರಂಗಭೂಮಿಯ ಪ್ರೀತಿ ಬಿಡದೆ ಕಾಡುವ ನಟಿಯರಿಗೆ 'ಏಕಸ್ತ್ರೀ ಪ್ರದರ್ಶನ' ಒಂದು ಅನುಕೂಲಕರವಾದ ಅಭಿವ್ಯಕ್ತಿ.

* ಪಂಚಕನ್ಯೆಯರಲ್ಲಿ ಸೀತೆ ಬರುವುದಿಲ್ಲ. ಇಬ್ಬರು ತಾರಾಗಳಿದ್ದಾರೆ.


'ಉರಿಯ ಉಯ್ಯಾಲೆ'ಯಲ್ಲಿ ಬಿ. ಜಯಶ್ರೀ

ಗಿರೀಶ್ ಕಾರ್ನಾಡರ 'ಬಿಂಬ'– ಇಂತಹ ಒಂದು ಏಕಸ್ತ್ರೀ ನಾಟಕ. ಇದನ್ನು 'ಒಡಕಲು ಬಿಂಬ' ಎಂಬ ಹೆಸರಿನಲ್ಲಿ, ಗಿರೀಶ ಕಾರ್ನಾಡರ ನಿರ್ದೇಶನದಲ್ಲಿ ಅರುಂಧತಿ ನಾಗ್ (ಹಿಂದಿ, ಇಂಗ್ಲಿಷ್, ಮರಾಠಿಯಲ್ಲೂ) ಅಭಿನಯಿಸುತ್ತಾರೆ.

ಇದನ್ನು ಸ್ತ್ರೀವಾದಿನಾಟಕ ಎಂದು ಕರೆಯಲಾಗದಿದ್ದರೂ ಸ್ತ್ರೀಕೇಂದ್ರಿತ ನಾಟಕ ಎಂದು ಕರೆಯಬಹುದು. ಆರಂಭದಲ್ಲಿ, ಒಂದು ಟೆಲಿವಿಷನ್ ಸ್ಟುಡಿಯೋದಲ್ಲಿ ಕುಳಿತ ಕನ್ನಡದ ಸಣ್ಣಕತೆಗಾರ್ತಿ ಮಂಜುಳಾ ನಾಯಕ ಕಾಣಿಸಿಕೊಳ್ಳುತ್ತಾಳೆ. ವೇದಿಕೆಯಲ್ಲೆ ಒಂದು ಟೆಲಿವಿಝನ್ ಕೂಡ ಇದೆ. ಕನ್ನಡದ ಕತೆಗಾರ್ತಿ ಈಗ 'The river has no memories' ಎಂಬ ಇಂಗ್ಲಿಷ್ ಕಾದಂಬರಿ ಬರೆದು ಜಗತ್ಪ್ರಸಿದ್ಧಳಾಗಿದ್ದಾಳೆ. ಅದಕ್ಕೇ ಅವಳ ಭಾಷಣ ಟಿ.ವಿ.ಯಲ್ಲಿ ಪ್ರಸಾರವಾಗುತ್ತಿದೆ. ಕನ್ನಡದಲ್ಲಿ ಬರೆಯುತ್ತಿದ್ದ ತಾನು, ಮೊದಲ ಬಾರಿಗೆ ಇಂಗ್ಲಿಷ್‌ನಲ್ಲಿ ಬರೆದುದಕ್ಕಾಗಿ ಎದುರಿಸಿದ ವಿರೋಧ, ಆದರೆ ತನ್ನಿಂದ ಇಂಗ್ಲಿಷ್‌ನಲ್ಲೇ ಸಹಜವಾಗಿ ಬರೆಯಿಸಿಕೊಂಡ ಕಾದಂಬರಿ ಮುಂತಾದವುಗಳ ಬಗ್ಗೆ ಅಚ್ಚುಕಟ್ಟಾದ ಭಾಷಣ ಮಾಡಿ ಆಕೆ ಎದ್ದು ಹೋಗುತ್ತಿರುವಾಗ, ಆಕೆಯದೇ ಬಿಂಬ ವೇದಿಕೆಯಲ್ಲಿದ್ದ ಟೆಲಿವಿಝನ್‌ನಲ್ಲಿ ಮೂಡುತ್ತದೆ. ಆಕೆ ಗಾಬರಿಯಾಗುತ್ತಾಳೆ. ಬಿಂಬ ಹಲವು ಪ್ರಶ್ನೆಗಳಿಂದ ಮಂಜುಳೆಯನ್ನು ಚುಚ್ಚಿ ಸತ್ಯವನ್ನು ಹೊರಹಾಕಿಸುತ್ತದೆ.

ಆ ಸತ್ಯವೇನೆಂದರೆ : ಮಂಜುಳ ಕಾಲೇಜಿನಲ್ಲಿ ಅಧ್ಯಾಪಕಿ ಯಾಗಿದ್ದವಳು. ಇಂಗ್ಲಿಷ್ ಕಾದಂಬರಿಯ ರಾಯಧನ ಎಷ್ಟಿತ್ತೆಂದರೆ ಅಕೆ ಕೆಲಸವನ್ನೇ ಬಿಟ್ಟಳು. ಪತಿ ಪ್ರಮೋದಮೂರ್ತಿ ಸಾಫ್ಟ್‌ವೇರ್ ಇಂಜಿನಿಯರ್ ಆಗಿದ್ದ. ಈಗ ಅವಳಿಂದ ದೂರವಾಗಿ ದೂರದ ಅಮೆರಿಕೆಯಲ್ಲಿದ್ದಾನೆ.

ಮಂಜುಳಾಗೆ ಮಾಲಿನಿನಾಯಕ ಎಂಬ ತಂಗಿಯೊಬ್ಬಳಿದ್ದಳು. ಆಕೆ ಸೊಂಟದ ಕೆಳಗೆ ಸಂಪೂರ್ಣ ನಿಷ್ಕ್ರಿಯಳಾಗಿದ್ದು, ಹಾಸಿಗೆ ಹಿಡಿದಿದ್ದರೂ, ಅಪೂರ್ವ ಸುಂದರಿ, ಅದ್ಭುತ ಪ್ರತಿಭೆ. ಆಕೆ ಮಂಜುಳಾಳ ಮನೆಯಲ್ಲೇ ಇದ್ದಳು. ದಿನವಿಡೀ ಕಾಲೇಜಿನ ಕೆಲಸಕ್ಕೆಂದು ಮನೆಯ ಹೊರಗೆ ಇರುತ್ತಿದ್ದ ಮಂಜುಳಾಗೆ ಪ್ರಮೋದ–ಮಾಲಿನಿಯರ ನಡುವಿನ ಗಾಢ ಸಂಬಂಧ ಅರಿವಿಗೇ ಬಂದಿರಲಿಲ್ಲ. ಆರುತಿಂಗಳ ಹಿಂದೆ ಮಾಲಿನಿ ಸತ್ತು ಹೋದಳು. ಸತ್ತು ಹೋಗಿರುವ ಅವಳ ಟ್ರಂಕಿನಲ್ಲಿ ಈ ಇಂಗ್ಲಿಷ್ ಕಾದಂಬರಿಯ ಪ್ರತಿ ಸಿಕ್ಕಿತು. ಅದನ್ನು ಮಂಜುಳಾ ಇಂಗ್ಲೆಂಡಿನ ಪ್ರಕಾಶಕರೊಬ್ಬರಿಗೆ ಕಳುಹಿಸಿದಳು. ಕೂಡಲೇ ದೊಡ್ಡ ಮೊತ್ತದ ಚೆಕ್ ಒಂದು ಮಂಜುಳೆಯ ಹೆಸರಿಗೆ ಬಂತು. ಕಾದಂಬರಿಯ ಹಸ್ತಪ್ರತಿಯಲ್ಲಿ ಮಾಲಿನಿಯು ಎಂ. ನಾಯಕ ಎಂದು ಬರೆದಿದ್ದಳು. ಅದು ಮಂಜುಳಾ ನಾಯಕಳೂ ಆಗಬಹುದಲ್ಲ! ಇದನ್ನು ಉಪಯೋಗಿಸಿಕೊಂಡು ಮಂಜುಳಾ ಯಶಸ್ಸಿನ ಉತ್ತುಂಗಕ್ಕೇರಿದಳು.

ಮಂಜುಳೆಯ ಬಿಂಬ ಅವಳ ಅಂತಃಸಾಕ್ಷಿ ಎಂದುಕೊಳ್ಳುವುದಾದರೆ ಅಷ್ಟರಮಟ್ಟಿಗೆ ಅವಳು ಪ್ರಾಮಾಣಿಕಳು. ಆದರೆ, ಸ್ತ್ರೀಯ ಮಹತ್ವಾಕಾಂಕ್ಷೆ, ಅಸೂಕ್ಷ್ಮತೆ, ಕುಟಿಲತೆ, ಅಪ್ರಾಮಾಣಿಕತೆಯನ್ನು ಈ ನಾಟಕ ಅಭಿವ್ಯಕ್ತಿ ಗೊಳಿಸುತ್ತದೆ.

ಎಚ್.ಎಸ್. ವೆಂಕಟೇಶಮೂರ್ತಿಯವರ 'ಉರಿಯ ಉಯ್ಯಾಲೆ' ಮತ್ತು 'ಊರ್ಮಿಳಾ' ಎರಡು ಬಹುಮುಖ್ಯ ಏಕಸ್ತ್ರೀ ನಾಟಕಗಳು. 'ಉರಿಯಉಯ್ಯಾಲೆ'ಯನ್ನು ಸುರೇಂದ್ರನಾಥ ಅವರ ನಿರ್ದೇಶನದಲ್ಲಿ ಬಿ. ಜಯಶ್ರೀ ಅದ್ಭುತವಾಗಿ ಅಭಿನಯಿಸಿದ್ದಾರೆ. 'ಊರ್ಮಿಳಾ' ನಾಟಕವನ್ನು ತಮ್ಮದೇ ನಿರ್ದೇಶನದಲ್ಲಿ ಎನ್. ಮಂಗಳಾ ಅಭಿನಯಿಸಿ ಅದ್ಭುತ ಯಶಸ್ಸು ಸಾಧಿಸಿದ್ದಾರೆ.

'ಉರಿಯ ಉಯ್ಯಾಲೆ'ಯಲ್ಲಿ ಒಂದು ನಿಲುವುಗನ್ನಡಿಯ ಮುಂದೆ ನಿಂತ ವಯಸ್ಸಾದ ದ್ರೌಪದಿ, ತನ್ನ ಕೂದಲಲ್ಲಿ ಒಂದು ಬಿಳಿಕೂದಲೂ ಇಣುಕುತ್ತಿರುವುದನ್ನು ಕಂಡು ತನ್ನ ನೆನಪಿನ ಬುತ್ತಿಯನ್ನು ಬಿಚ್ಚುತ್ತಾ ಹೋಗುತ್ತಾಳೆ. ತನ್ನ ಬಾಲ್ಯ, ಅಮ್ಮನ ಬುದ್ಧಿವಾದ, ಈ ಕೂದಲೇ ಮಹಾಭಾರತ ಯುದ್ಧಕ್ಕೆ ನಾಂದಿಯಾದದ್ದು ಎಲ್ಲವೂ ಅವಳ ಮನಸ್ಸಿನ ತೆರೆಯ ಮೇಲೆ ಸರಿದು ಹೋಗುತ್ತದೆ. ಭೀಮನನ್ನು ಪ್ರೀತಿಯಿಂದ ನೆನೆಯುತ್ತ, ಧರ್ಮರಾಯನನ್ನು ಭಕ್ತಿಯಿಂದ ಸ್ಮರಿಸುತ್ತ, ತನ್ನನ್ನು ಗೆದ್ದ ಅರ್ಜುನನ ರೂಪವನ್ನು ಹೊಗಳುತ್ತ ಮುಂದುವರೆಯುತ್ತಾಳೆ. ದುರ್ಯೋಧನ, ದುಶ್ಶಾಸನ, ಕರ್ಣ ಎಲ್ಲರೂ ಈ ಕೂದಲಿನ ಪಾಶಕ್ಕೆ ಸಿಕ್ಕು ಬಲಿಯಾದವರು-ಆದರೂ ಕಥೆ ಮುಗಿದಿಲ್ಲ ಎನ್ನುತ್ತಾಳೆ. ಅಪ್ಪ-ಅಣ್ಣ-ಮಕ್ಕಳು ಎಲ್ಲರೂ ಒಂದೇ ದಿನ ಹತರಾದದ್ದು ಒಂದು ಹೆಣ್ಣಿಗೆ ಎಂತಹ ಭಯಂಕರ ವೇದನೆ ತರಬಲ್ಲುದು-ಎಂಬುದನ್ನು ನೆನಪಿಸಿ ಕೊಳ್ಳುತ್ತಾಳೆ. ಮಕ್ಕಳು ಕೊಲೆಯಾದಾಗ ತಾನು ಹುಚ್ಚಿಯಂತೆ ಅಳುತ್ತಿದ್ದರೆ ಪಾಂಡವರ ಕಣ್ಣುಗಳಲ್ಲಿ ನೀರಿರಲಿಲ್ಲ. ಸಾವಿನ ದಿಗಿಲಿತ್ತು. ಯುದ್ಧ ಮುಗಿದಾಗ, ಎಲ್ಲರನ್ನೂ ಕಳೆದುಕೊಂಡ ದುಃಖದಲ್ಲಿ ಯುಧಿಷ್ಠಿರ ಸ್ವರ್ಗಕ್ಕೆ ಶರೀರ ಸಮೇತ ಹೋಗೋಣ ಎನ್ನುತ್ತಾನೆ. ಪಂಚಪಾಂಡವರ ಹಿಂದೆ ತಾನೂ ಹೊರಡಬೇಕು... ಕಷ್ಟಗಳ ಸರಮಾಲೆಯಲ್ಲಿ ದ್ರೌಪದಿಗೆ ತನ್ನ ಸ್ವಯಂವರದ ನೆನಪಾಗುತ್ತದೆ. ಕರ್ಣನೇ ಬಾಣ ಹೂಡಿ ಮತ್ಸ್ಯಯಂತ್ರವನ್ನು ಭೇದಿಸಲಿ ಎಂದು ತಾನು ಬಯಸಿದರೂ, ಜನ ಸೂತಪುತ್ರನೆಂದು ಕುಹಕವಾಡಿದಾಗ ಕರ್ಣನ ಏಕಾಗ್ರತೆಗೆ ಭಂಗ ಬಂದು ಅವನು ಗೆಲ್ಲುವುದಿಲ್ಲ. ಆನಂತರ, ಬ್ರಾಹ್ಮಣನ ವೇಷದಲ್ಲಿದ್ದ ಅರ್ಜುನ ಗೆದ್ದಾಗ ಸಂತೋಷದಿಂದ ಆತನಿಗೆ ಮಾಲೆ ಹಾಕಿರುತ್ತಾಳೆ. ಗೆದ್ದೋನು ಅರ್ಜುನನಾದರೂ ಕುಂತಿಯ ಒತ್ತಾಯಕ್ಕೆ ಪಂಚಪಾಂಡವರಿಗೂ ಪತ್ನಿಯಾಗಿ ಏಗಬೇಕಾಗುತ್ತದೆ. ಐದು ಜನರ ಹೆಂಡತಿಯೆಂದೇ ದುರ್ಯೋಧನ, ದುಶ್ಶಾಸನ, ಕೀಚಕನಂತಹ ಹಡಬೆ ನಾಯಿಗಳು ಅವಳನ್ನು ಬಯಸಿ ಹಣ್ಣಾಗಿಸಿದರು. ಕೃಷ್ಣ ಮಾನ ಕಾಪಾಡಿದ. ಆ ಸೀರೆ ಅವಳಲ್ಲಿ ಹಲವು ನೆನಪುಗಳನ್ನು ಉಕ್ಕಿಸುತ್ತದೆ. ದ್ರೌಪದಿಯ ಮೇಲಿನ ಸಿಟ್ಟಿಗೆ ಅರ್ಜುನ ಉಲೂಪಿ, ಚಿತ್ರಾಂಗದೆಯರನ್ನು ಮದುವೆಯಾಗಿ ಪುರುಷಾಹಂಕಾರ ತೋರಿ, ದ್ರೌಪದಿಯ ಒಡಲಿಗೆ ಬೆಂಕಿಯಿಟ್ಟ.

ದ್ರೋಣನ ಮೇಲಿನ ದ್ವೇಷಕ್ಕೆ ದ್ರುಪದನು ದ್ರೌಪದಿಯನ್ನು ಪಾಂಡವರಿಗೆ ಮದುವೆ ಮಾಡಿಕೊಟ್ಟ. ತಾನು ದ್ವೇಷಕ್ಕಾಗಿಯೇ ಹುಟ್ಟಿ, ಪ್ರಳಯಕ್ಕಾಗಿಯೇ ಆದ ಸೃಷ್ಟಿ ಎಂದು ದ್ರೌಪದಿ ದುಃಖಿಸುತ್ತಾಳೆ. ತನ್ನ ಬದುಕಿನಲ್ಲಿ ಪ್ರೀತಿ ಎಲ್ಲಿದೆ? ಎಂದು ಹಪಹಪಿಸುತ್ತಾಳೆ ದ್ರೌಪದಿ.

ಬೆಳಗಾಗುತ್ತದೆ, ಇನ್ನು ಸ್ವರ್ಗಾರೋಹಣ ಪರ್ವ ಆರಂಭವಾಗಬೇಕು. ಪಂಚಪಾಂಡವರ ಹಿಂದೆ ದ್ರೌಪದಿ ಹೊರಡುತ್ತಾಳೆ. ಆಕೆ ಏದುಸಿರು ಬಿಡುತ್ತಿದ್ದಾಳೆ, ಮುಂದೆ ನಡೆಯಲಾರಳು. ಯುಧಿಷ್ಠಿರನನ್ನು ಕೂಗುತ್ತಾಳೆ- 'ಧಾರೆಯಲ್ಲಿ ಕೈಹಿಡಿದವನು, ಮುನ್ನಡೆಸು' ಎಂದು. ಅವನು ಹಿಂತಿರುಗಿ ನೋಡದೆ ಮುಂದೆ ಸಾಗುತ್ತಾನೆ. ಭೀಮನನ್ನು ಅಂಗಲಾಚುತ್ತಾಳೆ-ಅವನು ಕಿವಿಗೊಡುವುದಿಲ್ಲ. ಅರ್ಜುನನೂ ಕರೆದರೂ ತಿರುಗದೆ ಮುನ್ನಡೆದು ಹೋಗುತ್ತಾನೆ. 'ಕೊನೆಯಲ್ಲಿ ಉಳಿದಿರೋದು ಭೂಮಿ ಒಂದೇ, ಭೂಮಿ ಒಂದೇ' ಎಂದು ಭೂಮಿಗೆ ದ್ರೌಪದಿ ಕುಸಿಯುವಲ್ಲಿ ನಾಟಕ ಮುಗಿಯುತ್ತದೆ. ಈ ನಾಟಕದಲ್ಲಿ ದ್ರೌಪದಿ ಎಂಬ ವಿಶಿಷ್ಟ ಹೆಣ್ಣಿನ, ವಿಶಿಷ್ಟ ಬದುಕಿನ, ವಿಶಿಷ್ಟ ನೋವುಗಳನ್ನು ಎಚ್.ಎಸ್. ವೆಂಕಟೇಶಮೂರ್ತಿ ಯವರು ಶಕ್ತಿಪೂರ್ಣವಾಗಿ ಸೆರೆಹಿಡಿದಿದ್ದಾರೆ.

'ಉರಿಯಉಯ್ಯಾಲೆ'ಯ ದ್ರೌಪದಿಯಂತೆ 'ಊರ್ಮಿಳೆ' ಏಕಸ್ತ್ರೀ ನಾಟಕದ ಊರ್ಮಿಳೆಯೂ ರಾಜಷಾಹಿಯಲ್ಲಿ ನೊಂದ ಹೆಣ್ಣು. ಹದಿನಾಲ್ಕು ವರ್ಷಗಳ, ತಾನೇ ಆರೋಪಿಸಿಕೊಂಡ ವನವಾಸದ ನಂತರ, ಅವಳ ಮನೋಲೋಕದಲ್ಲಿ ನಡೆಯುವ ತಾಕಲಾಟ, ಸಂಘರ್ಷ, ತವಕ, ತಲ್ಲಣಗಳ ಸ್ವಗತ ಈ ನಾಟಕದಲ್ಲಿದೆ. ರಾಜವ್ಯವಸ್ಥೆ ತನ್ನನ್ನು ನಡೆಸಿಕೊಂಡ ಬಗ್ಗೆ, ತನಗಾದ ಶೋಷಣೆಯ ಬಗ್ಗೆ, ಅರಮನೆಯೊಳಗಿನ ಕ್ರೌರ್ಯ, ಅಮಾನವೀಯತೆಗಳ ಬಗ್ಗೆ ಸಿಟ್ಟಿದೆ, ನೋವಿದೆ.

ರಾಮ-ಸೀತೆಯರ ಜೊತೆಗೆ ಪತಿ ಲಕ್ಷ್ಮಣನೂ ವನವಾಸಕ್ಕೆ ಹೋದಾಗ ಊರ್ಮಿಳೆ ಏಕಾಂಗಿಯಾಗುತ್ತಾಳೆ. ಏರುಜವ್ವನದಲ್ಲಿ ಏಕಾಂಗಿ ಯಾಗಿರಬೇಕಾದ ಅವಳ ನೋವುಗಳ ಬಗ್ಗೆ ಯಾರೂ ಕನಿಕರ ತೋರುವುದಿಲ್ಲ. ಗಿಡಮರ ಬೆಳೆಸುತ್ತ ಆಕೆಯೂ ಸಾಧ್ವಿಯಂತೆ ವನವಾಸ ಅನುಭವಿಸುತ್ತಾಳೆ.

ಹದಿನಾಲ್ಕು ವರ್ಷ ವನವಾಸ ಮುಗಿಸಿ ರಾಮಲಕ್ಷ್ಮಣ ಸೀತೆಯರು ಅರಮನೆಗೆ ಹಿಂದಿರುಗಿದಾಗ, ಊರ್ಮಿಳೆಯೂ ಅರಮನೆಯನ್ನು ಪ್ರವೇಶಿಸುತ್ತಾಳೆ. ಹಿಂದೆ ನಡೆದ ಘಟನೆಗಳೆಲ್ಲ ಅವಳ ಮನಃಪಟಲದಲ್ಲಿ ಮೂಡಿ ಸ್ವಗತಗಳಾಗುತ್ತವೆ. ಈ ಅರಮನೆಯಲ್ಲಿ ಎಲ್ಲವೂ ನಿಗೂಢ, ಹೆಣ್ಣಿನ ಭಾವನೆಗಳಿಗೆ ಇಲ್ಲಿ ಬೆಲೆಯೇ ಇಲ್ಲ ಎಂದು ಅವಳಿಗನ್ನಿಸುತ್ತದೆ.

ಪಿತೃವಾಕ್ಯ ಪರಿಪಾಲಕನಾಗಿ ರಾಮ ಕಾಡಿಗೆ ಹೋಗಬೇಕು-ಅವನ ಜೊತೆಗೆ ಅವನ ಸಹಧರ್ಮಿಣಿ ಸೀತೆ. ಆದರೆ, ಲಕ್ಷ್ಮಣ ಹೋಗು ವಂತಹದ್ದೇನಿತ್ತು? ಎಂಬುದು ಅವಳಿಗೆ ಅರ್ಥವಾಗುವುದಿಲ್ಲ. ಮುಪ್ಪಿನ ತಂದೆ-ತಾಯಿಯರನ್ನು ನೋಡಿ ಕೊಳ್ಳುವ ಜವಾಬ್ದಾರಿಯನ್ನು ಲಕ್ಷ್ಮಣ ಊರ್ಮಿಳೆಯ ಮೇಲೆ ಹೊರಿಸುತ್ತಾನೆ, ಗೃಹಿಣಿಯ ಧರ್ಮದ ಪಾಠ ಹೇಳುತ್ತಾನೆ. ತನ್ನ ಬಾಳನ್ನೇ ಲೆಕ್ಕಿಸದವರ ಬಗ್ಗೆ ಊರ್ಮಿಳೆಯಲ್ಲಿ ಕಹಿ, ವ್ಯಂಗ್ಯ, ಕಟಕಿಗಳ ಮಾತು ಹೊಮ್ಮುತ್ತದೆ.

ರಾಮಲಕ್ಷ್ಮಣರ ವನವಾಸದ ವಿದ್ಯಮಾನಗಳನ್ನು ಪ್ರಶ್ನಿಸುವ ದಿಟ್ಟೆಯಾಗಿಯೂ, ವಿಚಾರವಂತೆಯಾಗಿಯೂ ಊರ್ಮಿಳೆ ಚಿತ್ರಿತ ಳಾಗಿದ್ದಾಳೆ. ಸೀತಾಪಹರಣ, ವಾಲಿಸಂಹಾರ, ಸೇತುಬಂಧನ, ರಾವಣ ಸಂಹಾರ, ಅಗ್ನಿಪ್ರವೇಶ-ಇವುಗಳೆಲ್ಲದರ ಹಿಂದೆ ಅಡಗಿರುವ ಧರ್ಮ ಸಂಘರ್ಷದ ಯಥಾರ್ಥತೆಯನ್ನು ಪ್ರಶ್ನಿಸುವ ದಿಟ್ಟ ಆಧುನಿಕ ಸ್ತ್ರೀಯಾಗಿ ನಮ್ಮ ಕಣ್ಣನ್ನೂ ತೆರೆಸುತ್ತಾಳೆ. ದಸ್ಯು ಸ್ತ್ರೀಯರನ್ನು ಅವಮಾನಿಸಿ ಅವರ ಮೂಗು ಕೊಯ್ದದ್ದು ಸರಿಯೇ? ಎಂದು ಪ್ರಶ್ನಿಸುತ್ತಾಳೆ. ಅವಳ ಮಾತುಗಳಲ್ಲಿ ಅವಳು ಇಂದಿನ ಸ್ತ್ರೀಯ ಪ್ರತಿನಿಧಿಯಷ್ಟೇ ಆಗುವುದಿಲ್ಲ, ರಾಮವಿದ್ಯಮಾನಗಳ ಕಟುವಿಮರ್ಶಕಿಯೂ ಆಗುತ್ತಾಳೆ.

ಹದಿನಾಲ್ಕು ವರ್ಷಗಳ ವನವಾಸದ ನಂತರ ಮರಗಿಡಗಳೇ ತನ್ನ ಸಂತಾನವೆಂದು ತಿಳಿದು 'ಗಂಡಿನ ಹಂಗೇ ಇಲ್ಲದೆ ಹೆಣ್ಣು ಗೃಹಸ್ಥಧರ್ಮ ನಡೆಸಬಹುದು' ಎಂಬ ಸತ್ಯವನ್ನು ಅರಿಯುವ ಊರ್ಮಿಳೆ ಅತ್ಯಾಧುನಿಕ ಹೆಣ್ಣಿನ ಪ್ರತೀಕ. ಈ ನಾಟಕದಲ್ಲಿ ವೆಂಕಟೇಶಮೂರ್ತಿಯವರು ಊರ್ಮಿಳೆಯ ಅಂತರಂಗವನ್ನು ಹೊಕ್ಕು, ಹರಿತವಾದ ಆದರೆ ಭಾವಾವೇಶಗಳಿಲ್ಲದ ಭಾಷೆಯಲ್ಲಿ ಹೃದಯಕಲಕುವಂತೆ ಊರ್ಮಿಳೆಯ ಸ್ಥಿತಿಯನ್ನು ಮನಗಾಣಿಸಿಕೊಟ್ಟಿದ್ದಾರೆ.

ರಂಗಾಯಣದ ಕಲಾವಿದೆ ಬಿ.ಎನ್. ಶಶಿಕಲಾ ತಮ್ಮ ದಿವಂಗತ ಪತಿ-ರಂಗಕರ್ಮಿ-ಬಸವರಾಜಕೊಡಗೆ ಸ್ಮರಣಾರ್ಥ ಪ್ರತಿವರ್ಷವೂ ಒಂದು ಏಕಸ್ತ್ರೀ ಪ್ರದರ್ಶನವನ್ನು ಆಯೋಜಿಸಿ ತಾವೇ ನಟಿಸುತ್ತಾರೆ. ಅವರ ಬಹುಮುಖ್ಯ ಏಕಸ್ತ್ರೀ ಪ್ರದರ್ಶನಗಳು – ಪಿ. ಲಂಕೇಶರ ಕಥೆಯಾಧಾರಿತ 'ಎ ಸೂಯಿಸೈಡ್ ನೋಟ್' (ನಿ: ನಟರಾಜ ಹೊನ್ನವಳ್ಳಿ), ಎರಡನೆಯದು – ಪರಶುರಾಂ ರಾವ ಎಮೂರ್ತಿಯವರ 'ವಾನಪ್ರಸ್ಥ' (ಅನು : ಲಿಂಗದೇವರು ಹಳೆಮನೆ – ನಿರ್ದೇಶನ: ಚಿದಂಬರರಾವ್


'ಊರ್ಮಿಳೆ'ಯಲ್ಲಿ
ಎಸ್. ಮಂಗಳಾ

ಜಂಬೆ), ಮೂರನೆಯದು ಶ್ರೀಮತಿ ನಾದಿರಾ ಬಬ್ಬರ್ ಅವರ ಹಿಂದಿಯ 'ಸಕ್ಕೂಬಾಯಿ' (ಅನು: ಚಂದ್ರಕಾಂತ ಕುಸನೂರು, ನಿರ್ದೇಶನ : ಮಂಜುನಾಥ ಬೆಳಕೆರೆ), ನಾಲ್ಕನೆಯದು – ಎಸ್. ರಾಮನಾಥರ 'ಕಸ್ತೂರಬಾ' (ನಿರ್ದೇಶನ: ಶಶಿಧರ ಭಾರಿಘಾಟ್)

ರಂಗಾಯಣದಲ್ಲಿ ಕಲಾವಿದೆಯಾಗಿ ಹದಿನೈದು ವರುಷಗಳಿಂದ ಸೇವೆ ಸಲ್ಲಿಸುತ್ತಿರುವ ಬಿ.ಎನ್. ಶಶಿಕಲಾ ನೀನಾಸಂ ಪದವೀಧರರು. ಇವರ ಏಕವ್ಯಕ್ತಿ ಪ್ರದರ್ಶನಗಳು ಜನಪ್ರಿಯವಾಗಿ ಕನ್ನಡ ರಂಗಭೂಮಿಯಲ್ಲಿ ಸಂಚಲನ ಉಂಟುಮಾಡಿವೆ.

'ಎ ಸೂಯಿಸೈಡ್ ನೋಟ್'ನಲ್ಲಿ ಕಥಾನಾಯಕಿ ಮೀನಾ ಬುದ್ಧಿವಂತೆ, ಸೂಕ್ಷ್ಮ ಮನಸ್ಸಿನ ಹೆಣ್ಣು. ಬದುಕಿನ ದಾರಿಯಲ್ಲಿ ಭೇಟಿಯಾದ ಗಂಡುಗಳ ಬಗ್ಗೆ ತೀವ್ರ ಚಿಂತನೆ ನಡೆಸಿ, ಕೊನೆಗೆ ಕಾಲೇಜಿನ ಲೆಕ್ಚರರ್ ವಿಧುರ ವಿಶ್ವನಾಥನನ್ನು ಮದುವೆಯಾಗುತ್ತಾಳೆ. ಆದರೆ, ಮದುವೆಗೆ ಮೊದಲು ಪರಿಚಯವಾಗಿ ಹತ್ತಿರಕ್ಕೆ ಬಂದಿದ್ದ ಜಗ್ಗು ಮನೆಗೆ ಬಂದಾಗ ಅವನಿಗೆ ಒಪ್ಪಿಸಿಕೊಳ್ಳದಿರಲು ಆಕೆಗೆ ಸಾಧ್ಯವಾಗುವುದಿಲ್ಲ. ಸರ್ವಗುಣ ಸಂಪನ್ನನಾದ ಪತಿಯನ್ನು ಮೋಸ ಮಾಡುತ್ತಿದ್ದೇನೆಂಬ ಭಾವನೆಯಲ್ಲಿ, ಪಾಪಪ್ರಜ್ಞೆಯಲ್ಲಿ ಬಳಲುತ್ತ 'ಸೂಯಿಸೈಡ್ ನೋಟ್' ಬರೆದಿಡುವ ತೀರ್ಮಾನ ಮಾಡುತ್ತಾಳೆ.

ಈ ಕಥೆ ಸ್ತ್ರೀವಾದವನ್ನು ಪರೀಕ್ಷೆಗೆ ಒಡ್ಡುವಂತಹ ಗುಣವುಳ್ಳದ್ದು. ಇದರ ನಾಟಕರೂಪ ಸಾಕಷ್ಟು ಪ್ರಶಂಸೆಗೆ ಒಳಗಾಗಿತ್ತು.

ಶಶಿಕಲಾ ಅವರ ಇನ್ನೊಂದು ಏಕಸ್ತ್ರೀ ಪ್ರದರ್ಶನ 'ವಾನಪ್ರಸ್ಥ'. ಇದು ಪರುಶುರಾಂ ರಾಮಮೂರ್ತಿಯವರ ಇಂಗ್ಲಿಷ್ ನಾಟಕ. ಈ ನಾಟಕದ ಕೇಂದ್ರ ಸ್ತ್ರೀ-ಕುಂತಿ. ಕುಂತಿಯ ಒಳತೋಟಿಗಳನ್ನು, ತವಕ-ತಲ್ಲಣಗಳನ್ನು ನಾಟಕಕಾರರು ಕುಂತಿಯ ಬಾಲ್ಯ, ಕುಂತಿಯ ಯೌವನ ಹಾಗೂ ಕುಂತಿಯ ವಾನಪ್ರಸ್ಥದ ಘಟ್ಟಗಳಲ್ಲಿ ಹಿಡಿದಿಟ್ಟಿದ್ದಾರೆ. ಈ ಮೂರು ಅವಸ್ಥೆಗಳ ಭಾವಲೋಕದ ಮೂಲಕ ಕುಂತಿಯ ಪಾತ್ರವನ್ನು ಕಟ್ಟಿದ್ದಾರೆ.

ಒಬ್ಬ ಹೆಣ್ಣಾಗಿ, ಹೆಂಡತಿಯಾಗಿ, ರಾಣಿಯಾಗಿ, ತಾಯಿಯಾಗಿ ತನ್ನ ಒಡಲ ಕುಡಿಗಳ ಅಸ್ತಿತ್ವದ ಉಳಿವಿಗಾಗಿ ಇಡೀ ಬದುಕಿನುದ್ದಕ್ಕೂ ಹೋರಾಡಿದ ಮಹಾಭಾರತದ ಪಾತ್ರ-ಕುಂತಿ. ಮಹಾಭಾರತದ ಮಹಾಯುದ್ಧಕ್ಕೆ ಒಂದು ರೀತಿಯಲ್ಲಿ ಕಾರಣಕರ್ತಳಾದ ಕುಂತಿ, ದಾಯಾದಿಗಳ ವಿರುದ್ಧ ಯುದ್ಧ ಸಾರಿ, ತಾನೇ ಹೆತ್ತ ಮಕ್ಕಳನ್ನು ಯುದ್ಧಕ್ಕೆ ಹುರಿದುಂಬಿಸಿ, ಯುದ್ಧದಲ್ಲಿ ಗೆದ್ದ ನಂತರ... ವಾನಪ್ರಸ್ಥದ ಅಂಗಳದಲ್ಲಿ ನಿಂತು 'ಈ ಯುದ್ಧ ಅನಿವಾರ್ಯವಾಗಿತ್ತೇ?' ಎಂದು ಆತ್ಮಾವಲೋಕನ ಮಾಡಿಕೊಳ್ಳುವ ಕುಂತಿ ಇಲ್ಲಿ ನಮಗೆ ಕಾಣಸಿಗುತ್ತಾಳೆ. ಇದೊಂದು ರಾಜಕಾರಣಿ-ಘಟ್ಟಿ ಹೆಣ್ಣೊಬ್ಬಳ ಆತ್ಮಾವಲೋಕನದ ನಾಟಕ.

ಬಿ.ಎನ್. ಶಶಿಕಲಾ ಅವರ 'ಸಕ್ಕೂಬಾಯಿ' ಏಕಸ್ತ್ರೀ ಪ್ರದರ್ಶನ ಸಕ್ಕೂಬಾಯಿ ಎಂಬ ಮನೆಗೆಲಸದ ಹೆಂಗಸಿನ ಸುತ್ತ ಹೆಣೆಯಲಾಗಿರುವ ಕಥಾನಕ. ಈಕೆ ಏನೂ ಪುರಾಣದ ಪುಣ್ಯಕಥೆಯ ಕಥಾನಾಯಕಿಯಲ್ಲ, ಸ್ವಾತಂತ್ರ್ಯಸಂಗ್ರಾಮ ಮಾಡಿದ ವೀರಯೋಧಳೂ ಅಲ್ಲ. ಬಡತನದಲ್ಲೇ ಬೆಳೆದು, ಮೂಲತಃ ಬೆಳಗಾಂ ಜಿಲ್ಲೆಯ ಗಡಿಭಾಗದಿಂದ, ಕಷ್ಟಕಾಲದಲ್ಲಿ ಬೆಂಗಳೂರಿಗೆ ಕೆಲಸ ಅರಸಿ ಬಂದ ಶಕುಂತಲಾಬಾಯಿ ಯಶವಂತ ಚಾಮಡೆ. ಎಲ್ಲರ ಪ್ರೀತಿಯ ಸಕ್ಕೂಬಾಯಿ.

ಮಧ್ಯಮವರ್ಗದ ಮನೆಯೊಂದರಲ್ಲಿ ಕೆಲಸ ಮಾಡುವ ಈಕೆ, ಮನೆಯವರೆಲ್ಲ ಹೊರಗೆ ಹೋದ ಮೇಲೆ, ಕೆಲಸ ಮಾಡುತ್ತ ಮಾಡುತ್ತ ತನ್ನ ಬಾಳಿನ ಪುಟಗಳನ್ನು ತೆರೆದಿಡುತ್ತಾಳೆ. ಆ ನೆನಪುಗಳಲ್ಲಿ ಮಧ್ಯಮವರ್ಗದ ಕೊಳಕುತನ, ನೀಚತನ, ಹಾದರ, ಹಪಾಹಪಿ ಎಲ್ಲವನ್ನೂ ಬಿಚ್ಚಿಡುತ್ತಾಳೆ. ಹಾಗೆಯೇ ಅಪ್ಪನಿಗಾದ ಮೋಸ, ಬಡತನ, ಅಪ್ಪನಸಾವು, ತನ್ನ ಮೇಲೆ ನಡೆದ ಅತ್ಯಾಚಾರ, ತಂಗಿ ಹಾದಿತಪ್ಪಿದ್ದು, ಗಂಡನ ತಾಪತ್ರಯಗಳು, ಪ್ರೀತಿ ಮತ್ತು ಅವನಸಾವು ಮುಂತಾದ ಆತ್ಮಕಥೆಯ ಸಾಲುಗಳು ಓದುಗರ ಕಣ್ಣನ್ನು ತೇವಗೊಳಿಸುತ್ತವೆ. ಕೊನೆಯಲ್ಲಿ ಮೂಡಿತೊಂದು ಆಶಾಕಿರಣ-ವಿದ್ಯಾವತಿಯಾದ ಮಗಳು ತಾಯಿಯ ಕಡುಕಷ್ಟ ನೋಡಿಯೇ ಕವಯಿತ್ರಿಯಾಗುತ್ತಾಳೆ. ವೇದಿಕೆಯೊಂದರಲ್ಲಿ 'ಅವ್ವ ಏಳು ತಲೆಯೆತ್ತಿ ನೋಡು ಬಂದಿದೆ ಸಮಯ' ಎಂದು ಪದ್ಯ ಓದುತ್ತ ತಾಯಿಯನ್ನು ವೇದಿಕೆಗೆ ಕರೆದು ಸನ್ಮಾನಿಸುತ್ತಾಳೆ. ಸಾಮಾನ್ಯ ಹೆಣ್ಣೊಬ್ಬಳ ಹೃದಯದಲ್ಲೂ ಅನುಭವಗಳ ಭಂಡಾರವಿದೆ ಎಂದು ಸಾರುವ ಈ ನಾಟಕ ಮಹಿಳಾದನಿ ಉಳ್ಳದ್ದು.

ಬಿ.ಎನ್. ಶಶಿಕಲಾ ಅವರ ಮತ್ತೊಂದು ಪ್ರಮುಖ ಏಕಸ್ತ್ರೀ ಪ್ರದರ್ಶನ 'ಕಸ್ತೂರಬಾ.' ಈ ನಾಟಕದಲ್ಲಿ ಕಸ್ತೂರಬಾಳ ಬದುಕು ಅನಾವರಣಗೊಳ್ಳುವುದರ ಜೊತೆಗೇ ಕಸ್ತೂರಬಾಳ ಪಾತ್ರವನ್ನು ನಟಿಸುತ್ತಿರುವ ರಂಗನಟಿಯ ಬದುಕೂ ಅನಾವರಣಗೊಳ್ಳುತ್ತದೆ, ಒಂದರೊಡನೊಂದು ಸಂಘರ್ಷಕ್ಕಿಳಿಯುತ್ತವೆ. ಕಸ್ತೂರಬಾ ಸಂಪ್ರದಾಯಸ್ಥ, ದೃಢನಿಷ್ಠೆಯ ಹೆಣ್ಣಾದರೆ ನಟಿಯು ಆಧುನಿಕ ಸಂವೇದನೆಯುಳ್ಳ ತನ್ನ ಪತಿಯೊಡನೆ ಕೆಲವಾದರೂ ಭಿನ್ನಾಭಿಪ್ರಾಯವಿರುವ ಹೆಣ್ಣು. ಕಸ್ತೂರಬಾ ಮಹಾತ್ಮನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯಬಲ್ಲಳು. ಅದೂ ಗಾಂಧೀಜಿ ದೇಶಕ್ಕೇ ಪಿತ. ಆದರೆ, ಈ ಆಧುನಿಕ ಹೆಣ್ಣು(ನಟಿ) ಸಾಮಾನ್ಯ ಗಂಡಸಿನ ಪುರುಷಾಹಂಕಾರದ ಎದುರು, ತನ್ನೊಳಗಿನ ಕಸ್ತೂರಬಾಳನ್ನು ಆವಾಹಿಸಿಕೊಳ್ಳುತ್ತಾಳೆ.

ನಾಟಕದಲ್ಲಿ ಕಸ್ತೂರಬಾಳ ಬದುಕಿನ ವ್ಯಥೆಗಳು, ಸಂಕೀರ್ಣತೆಗಳು, ಸಾಂಸಾರಿಕ-ಸಾರ್ವಜನಿಕ ಬದುಕಿನಲ್ಲಿ ಎದುರಿಸಿದ ಸವಾಲುಗಳು ಎಲ್ಲವೂ ಅನಾವರಣಗೊಂಡಿವೆ. ಆದರೆ, ನಾಟಕಕಾರ ರಾಮನಾಥರು-ಒಮ್ಮೆ ಗಾಂಧೀಜಿ, ಮಲಹೊರುವುದರ ಬಗ್ಗೆ ಅಸಹನೆ ತೋರಿದ ಕಸ್ತೂರಬಾಳನ್ನು ಹೊಡೆದು ಮನೆಯಿಂದ ಹೊರಗಟ್ಟಿದ ಸಂಗತಿಯನ್ನು ನಾಟಕದಲ್ಲಿ ಬಿಂಬಿಸಲೇ ಇಲ್ಲ. ಇದು ಮಹಾತ್ಮನನ್ನು ಬಚಾಯಿಸುವ ಪ್ರಯತ್ನವೋ? ಇಲ್ಲ, ಕಸ್ತೂರಬಾಳ ಘನಘೋರ ನೋವನ್ನು ಮುಚ್ಚಿಡುವ

ಪ್ರಯತ್ನವೋ? ಈ ನಾಟಕದಲ್ಲಿ ಶಶಿಕಲಾ ಸಮರ್ಥವಾಗಿ ಅಭಿನಯಿಸಿ ತಾವು ಪರಿಪೂರ್ಣ ನಟಿ ಎಂಬುದನ್ನು ತೋರಿಸಿಕೊಟ್ಟರು.

ಶ್ರೀಮತಿ ಲಕ್ಷ್ಮಿಚಂದ್ರಶೇಖರ್ ದೇಶ ವಿದೇಶಗಳಲ್ಲಿ ತಮ್ಮ ಏಕಸ್ತ್ರೀ ಪ್ರದರ್ಶನಗಳನ್ನಿತ್ತು ಅದಕ್ಕಾಗೇ ತಮ್ಮನ್ನು ಸಂಪೂರ್ಣ ಅರ್ಪಿಸಿಕೊಂಡವರು. ಇವರ, 'ಹೆಣ್ಣಲ್ಲವೇ?' ಏಕಸ್ತ್ರೀ ಪ್ರದರ್ಶನ ನೂರಕ್ಕೂ ಮಿಕ್ಕಿ ಪ್ರೇಕ್ಷಕರೆದುರಿಗೆ ಬಂದಿದೆ. ಸಿಂಗಾರವ್ವ, ಕಿತ್ತಳೆಮನೆ ಕಾವೇರಿ, ಮೀಡಿಯಾ ಮತ್ತು ಎದ್ದೇಳು ಈ ನಾಟಕಗಳೂ ನೂರಾರು ಪ್ರದರ್ಶನಗಳನ್ನು ಕಂಡಿವೆ. ಇವರ ಎಲ್ಲ ನಾಟಕಗಳನ್ನೂ ಸೌಮ್ಯವರ್ಮ ನಿರ್ದೇಶಿಸಿದ್ದಾರೆ. ಇವರ ಎಲ್ಲ ನಾಟಕಗಳಲ್ಲೂ ರಂಗಸಜ್ಜಿಕೆ, ರಂಗಪರಿಕರಗಳ ಬಳಕೆ ನಾಟಕಕ್ಕೆ ಪೂರಕವಾಗಿದ್ದು ಶಿಸ್ತು, ವೃತ್ತಿಪರತೆ ಎದ್ದು ಕಾಣುತ್ತದೆ.

'ಹೆಣ್ಣಲ್ಲವೇ?' ನಾಟಕವನ್ನು ಅಭಿನಯಿಸುವ ನಟಿ ಮಧ್ಯಮವರ್ಗದ, ಉದ್ಯೋಗಸ್ತ ಮಹಿಳೆ. ಆಕೆ ಬೆಳಿಗ್ಗೆ ಎದ್ದು ಕಸಗುಡಿಸುತ್ತಲೇ, ಹಿಟ್ಟು ಬೀಸುತ್ತಲೇ, ಗಂಡನ ಬೂಟುಗಳಿಗೆ ಪಾಲಿಷ್ ಮಾಡುತ್ತಲೇ, ಅಕ್ಕಿ ಕೇರುತ್ತಲೇ ಲೋಕದ ಎಲ್ಲ ಹೆಂಗಸರ ಕಥೆಗಳನ್ನು ಹೇಳುತ್ತಾಳೆ. ಇದು ಅಪ್ಪಟ ಸ್ತ್ರೀವಾದಿ ನಾಟಕ. 'ಹೆಣ್ಣು ಹಡೆಯಲು ಬೇಡ, ಹೆರವರಿಗೆ ಕೊಡಬೇಡ' ಎಂಬ ಜನಪದ ತ್ರಿಪದಿಯೊಂದಿಗೆ ಆರಂಭವಾಗುವ ನಾಟಕ, ಜನಪದ ಕಥನಗೀತೆಯ ಭಾಗೀರತಿ ಹೇಗೆ ತನಗಿಷ್ಟವಿಲ್ಲದಿದ್ದರೂ ಕೆರೆಗೆ ಬಲಿಯಾದಳು, ಟಿ.ಪಿ. ಕೈಲಾಸಂ ಅವರು ಸೃಷ್ಟಿಸಿದ ನಾಗತ್ತೆ ಎಂಬ ಸಕೇಶಿಯ ಗೋಳು, ರೂಪ ಕನ್ವರ್ ಸತಿಯಾದದ್ದು, ಸೀತೆಯ ಅಗ್ನಿಪರೀಕ್ಷೆ, ದ್ರೌಪದಿಯ ಅಳಲು, ಗಾಂಧಾರಿಯ ಇಚ್ಛಾಕುರುಡುತನ, ಮಾಧವಿಯ ದುರಂತ, ಅತ್ಯಾಚಾರಕ್ಕೊಳಗಾದ ಭಾಂವ್ರಿದೇವಿಯ ಹೋರಾಟದ ಕೆಚ್ಚು ಮುಂತಾದುವನ್ನು ದಿಟ್ಟತನದಿಂದ, ಅನುಕಂಪೆಯಿಂದ ಸಹಾನುಭೂತಿ, ಸ್ವಾತಿಕರೋಷಗಳಿಂದ ಚಿತ್ರಿಸುತ್ತ ಹೋಗುತ್ತದೆ. ಕೊನೆಯಲ್ಲಿ ಅಭಿನಯಿಸುತ್ತಿರುವ ನಟಿಯೂ ಗಡಿಬಿಡಿಯಲ್ಲಿ ತನ್ನ ಕೆಲಸಕ್ಕೆ ಹೊತ್ತಾಯಿತೆಂದು ನಿರ್ಗಮಿಸುವಲ್ಲಿ ನಾಟಕ ಮುಗಿಯುತ್ತದೆ.

ಲಕ್ಷ್ಮೀಚಂದ್ರಶೇಖರ್ ಅವರ ಇನ್ನೊಂದು ನಾಟಕ 'ಕಿತ್ತಲೆಮನೆ ಕಾವೇರಿ'ಯನ್ನು ನೋಡಿದಾಗ ಚೆಕಾವ್‌ನ 'ಚೆರ್ರಿಹಣ್ಣಿನ ತೋಟ' ನಾಟಕದ ನಾಯಕಿಯ ನೆನಪಾಯಿತು. ಕಾವೇರಿ 'ಕಿತ್ತಲೆಮನೆ' ಎಂಬ ದೊಡ್ಡ ಬಂಗಲೆಯ ಒಡತಿ. ದೊಡ್ಡಮನೆ–ದೊಡ್ಡಸಂಸಾರ–ಆಗರ್ಭ ಶ್ರೀಮಂತರು. ಬಡವರ ಮನೆಯ ಹುಡುಗಿ ಕಾವೇರಿ, ಹಿರಿಯನಾದ ಬಿದ್ದಪ್ಪನಿಗೆ ಎರಡನೆ ಹೆಂಡತಿಯಾಗಿ ಬಂದವಳು. ಬಡವರ ಮನೆಯ ಹುಡುಗಿ ಎಂದು ವಾರಗಿತ್ತಿಯರು ಅಸಡ್ಡೆ ತೋರಿದರೂ, ತನ್ನ ಎಡೆಬಿಡದ ದುಡಿಮೆಯಿಂದ ಎಲ್ಲರ ಮನಸ್ಸು ಗೆದ್ದವಳು. ಮಾವನಿಗೆ ಪ್ರಿಯವಾದಳು. ಮಕ್ಕಳು ಹುಟ್ಟಿದರು. ಮಕ್ಕಳು ದೊಡ್ಡವರಾದ ಮೇಲೆ ಅವಳ ಜೀವನದಲ್ಲಿ ಅಲ್ಲೋಲ ಕಲ್ಲೋಲವಾಯಿತು. ಹಿರಿಯಮಗ ಸನ್ನಿ, ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದೇಶಕ್ಕೆ ಹೋದವನು ವಿದ್ಯಾಭ್ಯಾಸ ಬಿಟ್ಟು ಕುದುರೆಲಾಯದಲ್ಲಿ ಕೆಲಸಕ್ಕೆ ಸೇರಿದ್ದು ಕಾವೇರಿಗೊಂದು ಆಘಾತ. ಸ್ವಲ್ಪಕಾಲದ ನಂತರ ಸನ್ನಿ ವಿದೇಶದಲ್ಲಿಯೇ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಪತಿ ಬಿದ್ದಪ್ಪ ಕಾಲವಾಗುತ್ತಾನೆ. ಅಮೆರಿಕೆಗೆ ಹೋದ ಮಗಳು ಅಲ್ಲಿಯೇ ವಿದೇಶಿಯೊಬ್ಬನನ್ನು ಮದುವೆಯಾಗಿ ನೆಲೆನಿಲ್ಲುತ್ತಾಳೆ. ಈಗ ಕಿತ್ತಲೆಮನೆಯ ಸುತ್ತಲೂ ಶಾಂತ ವಾತಾವರಣ ಉಳಿದಿಲ್ಲ. ಕೊನೆಯಲ್ಲಿ ಒಬ್ಬಂಟಿಯಾಗಿ ಕುರ್ಚಿಯಲ್ಲಿ ಕುಸಿದು ಕುಳಿತ ಕಾವೇರಿ ಪ್ರೇಕ್ಷಕರ ಕಣ್ಣಂಚಿನಲ್ಲಿ ನೀರು ತರಿಸುತ್ತಾಳೆ. ಇದೊಂದು ಸ್ತ್ರೀಕೇಂದ್ರಿತ ನಾಟಕ. ಲಕ್ಷ್ಮೀಚಂದ್ರಶೇಖರ್ ಅವರ ಲವಲವಿಕೆಯ ಅಭಿನಯ ಮೆಚ್ಚುವಂತಹದು.

'ಎದ್ದೇಳು' ಒಂದು ಕಿರುನಾಟಕ. ಹಾಸ್ಯದ ಲವಲವಿಕೆಯ ಧಾಟಿಯಲ್ಲೇ ಮುಂದುವರಿದು ಹೆಣ್ಣಿನ ಬಾಳಿನ ನಿರಂತರ ಗೋಳನ್ನು ಮನಮುಟ್ಟುವಂತೆ ಚಿತ್ರಿಸುತ್ತದೆ. ಮೀನಾ ಬೆಳಿಗ್ಗೆ ಆರು ಗಂಟೆಗೆ ಎದ್ದು, ಮಗುವಿಗೆ ಬಟ್ಟೆ ತೊಡಿಸಿ, ಸ್ನಾನಮಾಡಿಸಿ, ಹಾಲು ಕುಡಿಸಿ, ತಾನೂ ತಯಾರಾಗಿ, ಅದನ್ನು ಬೇಬಿ ಸಿಟ್ಟಿಂಗ್ ಸೆಂಟರ್‌ನಲ್ಲಿ ಬಿಟ್ಟು ತಾನು ಆಫೀಸಿಗೆ ಹೊರಡುವವಳಿದ್ದಾಳೆ. ಎರಡು ಬ್ಯಾಗುಗಳನ್ನು ಹೊತ್ತು, ಮಗುವನ್ನು ಹೊತ್ತು ಆಫೀಸಿಗೆ ಹೊರಟವಳಿಗೆ ಬೀಗದ ಕೈ ಸಿಗುವುದಿಲ್ಲ. ಹಿಂದಿನ ದಿನ ತಾನು ಆಫೀಸಿನಿಂದ ಬಂದಾಗ ಬೀಗ ತೆಗೆದು, ಬೀಗದ ಕೈ ಎಲ್ಲಿಟ್ಟೆ ಎಂದು ನೆನಪಿಸಿಕೊಳ್ಳುವ ಕ್ರಿಯೆಯಲ್ಲಿ–ಹಿಂದಿನ ದಿನದ ಘಟನೆಗಳನ್ನೆಲ್ಲಾ ಪುನರಾವರ್ತಿಸುತ್ತಾಳೆ. ಈ ಪುನರಾವರ್ತನೆಯ ಹೊತ್ತಿನಲ್ಲೇ ಅವಳ ಬದುಕಿನ ಜಂಜಾಟಗಳು, ಅವಳ ಪತಿಯ ಪುರುಷಾಹಂಕಾರ, ಕಮರಿಹೋಗಿರುವ ಅವಳ ಕನಸುಗಳು ಎಲ್ಲವೂ ಬಿಚ್ಚಿಕೊಳ್ಳುತ್ತವೆ. ಕೊನೆಗೂ ಬೀಗದ ಕೈ ಸಿಕ್ಕಿತು.... ಆದರೆ ಅಂದು ಭಾನುವಾರ. ಮತ್ತೆ ಆಫೀಸಿಗೆ ಹೋಗುವುದಿಲ್ಲ ಎಂದು ರಜಾದಿನ–ಮಜಾದಿನ ಎಂದು ಹಾಡುತ್ತ ಮುಸುಕೆಳೆದು ಮಲಗುತ್ತಾಳೆ.

'ಮೀಡಿಯ' ಯೂರಿಪಿಡೀಸನ ಗ್ರೀಕ್‌ನಾಟಕ 'ಮೀಡಿಯ'ವನ್ನು ಆಧರಿಸಿದ ಅದರ ಸಂಕ್ಷಿಪ್ತರೂಪ. ಮೂಲನಾಟಕದ ಹಲವಾರು ರಂಜನೀಯ ಘಟನೆಗಳನ್ನು ಇಲ್ಲಿ ಕೈ ಬಿಡಲಾಗಿದೆ. ಮೀಡಿಯಾ, ಜೇಸನ್‌ಗಾಗಿ ತನ್ನ ತವರನ್ನು ತೊರೆದು ಬಂದವಳು. ಅವಳಿಗೆ ಎರಡು ಮಕ್ಕಳು. ಆದರೆ, ಈಗ ಜೇಸನ್ ಮತ್ತೊಬ್ಬ ಹೆಣ್ಣನ್ನು ಮದುವೆಯಾಗಲು ಅಣಿಯಾಗಿದ್ದಾನೆ. ಕ್ರೋಧಗೊಂಡ ಮೀಡಿಯ ತನ್ನೆರಡು ಮಕ್ಕಳನ್ನು ಕೊಂದು, ಜೇಸನ್ನನ ಮೇಲೆ ಸೇಡು ತೀರಿಸಿಕೊಳ್ಳುತ್ತಾಳೆ. ಹೊಸ ಹೆಣ್ಣಿನ ಜನನವಾಗಲಿ ಎಂಬ ಆಶಯದೊಂದಿಗೆ ನಾಟಕ ಮುಗಿಯುತ್ತದೆ.

1970ರ ನಂತರ, ಸ್ತ್ರೀವಾದಿ ಚಳವಳಿಯು ಶಕ್ತಿಯುತವಾದ ಮೇಲೆ ಅದು ನಾಟಕಕಾರರ ಮೇಲೂ, ಸ್ತ್ರೀರಂಗ ಕರ್ಮಿಗಳ ಮೇಲೂ ಪ್ರಭಾವ ಬೀರಿದೆ. ಹೆಣ್ಣು ತಾನು ಸಾಮಾನ್ಯಳಲ್ಲ. ನಿಕೃಷ್ಟಳಲ್ಲ, ಎರಡನೇ ದರ್ಜೆಯವಳಲ್ಲ ಎಂಬುದನ್ನು ಸಾಬೀತು ಪಡಿಸುತ್ತಿದ್ದಾಳೆ.

●


'ಶಕುಂತಲೆಯೊಡನೆ ಒಂದು ಅಪರಾಹ್ನ'
ಭಾಗೀರಥಿಬಾಯಿ ಕದಂ

# ಮಾಧ್ಯಮ ಮತ್ತು ಮಹಿಳೆ

■ *ಪಿ.ಜಿ. ಮಂಜುಳಾ*

*(ಹಿಂದಿನ ಸಂಚಿಕೆಯಿಂದ)*

ನಗ್ನ ಸುಂದರಿಯರ ಚಿತ್ರಗಳ ಪ್ರಕಟಣೆಯನ್ನೂ ಲೈಂಗಿಕ ವಿಚಾರಗಳ ಮುಕ್ತವಾದ ಸರಿಯಾದ ಶಿಕ್ಷಣವನ್ನೂ ಬಹಿರಂಗವಾಗಿ ಬೆಂಬಲಿಸಲು ಅವರು ಹಿಂದೆಗೆಯಲಿಲ್ಲ. (ವಿಜಯಾ ದಬ್ಬೆ; ಮಹಿಳೆ ಸಾಹಿತ್ಯ ಸಮಾಜ; ಪುಟ 102). ಗಿರಿಬಾಲೆ, ವಿಶಾಖ ಎಂಬ ಎಂದಿನ ತಮ್ಮ ಕಾವ್ಯನಾಮ ಗಳಿಂದಲೇ ಲೇಖನಗಳನ್ನು ಪ್ರಕಟಿಸಿದ್ದಾರೆ. ಆಗ ಬಂದ ಒಂದು ಪ್ರತಿಕ್ರಿಯೆ ಹೀಗಿತ್ತು: "....ಅಂತಹ ಅಶ್ಲೀಲ ಪತ್ರಿಕೆಯಲ್ಲಿ ಗಿರಿಬಾಲೆಯ ಲೇಖನ ವಿರುವುದಾಗಿ ಜಾಹೀರಾತನ್ನು ಓದಿ ನನಗೆ ತಲೆಗೆ ತಣ್ಣೀರು ಹೊಯ್ದಂತಾಯಿತು. ಎಲ್ಲಿಂದ ಎಲ್ಲಿಗೆ ಜಾರಿದಿರಿ ಅಕ್ಕ... ನಿಮಗೆ ಸ್ತ್ರೀ ಸ್ವಾಭಾವಿಕವಾದ ಲಜ್ಜೆಯಿಲ್ಲವೆ? ಸ್ತ್ರೀ ಜಾತಿಗೇ ನಿಮ್ಮಿಂದ ಅಪಚಾರವಾಗಿದೆ. ಮುಂದಾದರೂ ನಿಮ್ಮ ಲೇಖನಿಗೆ ಒಂದು ಸೀಮೆಯಿರಲಿ."

ಮಾರ್ಚ್ 1951ರಲ್ಲಿ 'ನಿಸರ್ಗ'ದಲ್ಲಿ 'ನಿಸರ್ಗದ ಸಂದೇಶವೇನು?' ಎಂಬ ತಮ್ಮ ಲೇಖನದಲ್ಲಿ ಬಂದ ಹಲವು ಆಕ್ಷೇಪಗಳನ್ನು ಪ್ರಕಟಿಸಿ ಅದಕ್ಕೆ ಅಲ್ಲಿಯೇ ಉತ್ತರ ಕೊಟ್ಟಿದ್ದಾರೆ. 'ಕಥಾವಳಿ'ಯಲ್ಲಿ ಸಹೋದರಿಯರಿಗೆ ಒಳ್ಳೆಯ ಸಲಹೆಗಳನ್ನೀಯುತ್ತಾ ಬಂದಿರುವ ನೀವೇ ಇಂಥ ಪಾಪಾಚರಣೆ ಯನ್ನು ಪ್ರೋತ್ಸಾಹಿಸುವುದೇ?.... ಪತ್ರಿಕೆ ಹೊರಡುವ ಮೊದಲೇ ಅದರ ಜಾಹೀರಾತಿನಿಂದ ಸ್ತ್ರೀಯರ ಮಾನವನ್ನು ಬಯಲಿಗೆಳೆಯಲು ಹೊರಡುವ ಪತ್ರಿಕೆಯದು ಎಂದು ಊಹಿಸಿದ್ದೇನೆ. ಅಂತಹ ಪತ್ರಿಕೆಗಳನ್ನು ಸ್ತ್ರೀ ಸಮೂಹವೇ ವಿರೋಧಿಸಬೇಕಾಗಿರುವಾಗ, ಲೇಖನಗಳಿಂದ ಪ್ರೋತ್ಸಾಹಿಸು ವುದೇ? ....ಸ್ತ್ರೀ ಜಾತಿಗೇ ನಿಮ್ಮಿಂದ ಅಪಚಾರವಾಗಿದೆ ಎಂಬ ಕಟು ಟೀಕೆಗಳೂ ಬಂದಿವೆ. ಆದರೆ ತಮ್ಮನ್ನು ಸಮರ್ಥಿಸಿಕೊಂಡು, ಅದಕ್ಕೆ ಉತ್ತರವನ್ನೂ ಗಿರಿಬಾಲೆ ಪ್ರಕಟಿಸಿದ್ದಾರೆ. "ಆರೋಗ್ಯದಲ್ಲಿ ನಿಸರ್ಗದ ಪಾತ್ರವನ್ನು ಎತ್ತಿ ಹಿಡಿಯುವ ಉದ್ದೇಶ ಉಳ್ಳದ್ದು ನಿಸರ್ಗ ಪತ್ರಿಕೆ. ಇಂಥ ಪತ್ರಿಕೆಯು ಅಶ್ಲೀಲವಲ್ಲ; ಜ್ಞಾನಬೋಧಕವಾದದ್ದು. ಇದರಲ್ಲಿ ಬರೆಯುವುದು ತಪ್ಪಲ್ಲ" ಎಂದು ವಿವರಿಸಿದ್ದಾರೆ. ವಿರೋಧವನ್ನೂ ಎದುರಿಸುವ ಛಾತಿ ಅವರಲ್ಲಿತ್ತು.

'ಪ್ರತಿಭಾಳ ಟಿಪ್ಪಣಿ ಪುಸ್ತಕದಿಂದ' ಎಂಬ ಸ್ಥಿರ ಶೀರ್ಷಿಕೆಯಡಿಯಲ್ಲಿ ಕತ್ತು, ಕಣ್ಣು, ಕಿವಿ, ಮೂಗು, ಬೆನ್ನು ಹೀಗೆ ಶರೀರದ ಎಲ್ಲ ಭಾಗಗಳ ಆರೋಗ್ಯವನ್ನು ಕಾಪಾಡಿಕೊಳ್ಳುವ ವಿಧಾನವನ್ನು ತಿಳಿಸಿದ್ದಾರೆ. ಶರೀರದ ಎಲ್ಲಾ ಭಾಗಗಳೂ ಆರೋಗ್ಯದಿಂದ ಕೂಡಿದ್ದರೆ ಸೌಂದರ್ಯವು ತನ್ನಂತೆಯೇ ವೃದ್ಧಿಸುತ್ತದೆ. ಅದಕ್ಕಾಗಿ ಕೃತಕ ಸೌಂದರ್ಯವರ್ಧಕಗಳನ್ನು ಬಳಸುವ ಅಗತ್ಯವಿಲ್ಲ ಎಂದಿದ್ದಾರೆ. ಕೆಲವು ವ್ಯಾಯಾಮಗಳನ್ನೂ ತಿಳಿಸಿದ್ದಾರೆ. ಸಾಮಾನ್ಯವಾಗಿ ಬರುವ ಸಣ್ಣ ಪುಟ್ಟ ಕಾಯಿಲೆ ಕಸಾಲೆಗಳಿಗೆ ನಾವು ದಿನನಿತ್ಯ ಬಳಸುವ ಆಹಾರ ಪದಾರ್ಥಗಳು ಹಾಗೂ ಸುಲಭವಾಗಿ ದೊರೆಯುವ ಸೊಪ್ಪು, ತರಕಾರಿಗಳಿಂದಲೇ ತಯಾರಿಸಬಹುದಾದ ಔಷಧೋಪಚಾರ ಗಳನ್ನೂ ತಿಳಿಸಿದ್ದಾರೆ. ಲೇಖನಗಳ ಶೀರ್ಷಿಕೆಗಳನ್ನೇ ಗಮನಿಸಿ: 'ಬೊಜ್ಜು ಬೆಳೆಯುವುದೇಕೆ?' 'ಮಜ್ಜಿಗೆ ಉಪಯೋಗಿಸಿರಿ,' 'ಅಜೀರ್ಣ ರೋಗದಿಂದ ನರಳುವಿರಾ?' ಇತ್ಯಾದಿ. ಈಗ ಕನ್ನಡದ ಮುಖ್ಯವಾಹಿನಿ ಪತ್ರಿಕೆಗಳಲ್ಲೂ ಇದೇ ಮಾದರಿಯ ಲೇಖನಗಳು ಹೆಚ್ಚು ಪ್ರಚಲಿತವಿರುವುದನ್ನು ಗಮನಿಸಬಹುದು. 'ವೆಲ್‌ನೆಸ್' ಅಥವಾ ಆರೋಗ್ಯ ಕುರಿತಾದ ಕಾಳಜಿ ಇಂದಿನ ದಿನಗಳಲ್ಲಿ ಹೆಚ್ಚಿರುವುದರಿಂದ ಈ ಬಗೆಯ ಲೇಖನಗಳು ಪ್ರಾಮುಖ್ಯ ಗಳಿಸಿಕೊಂಡಿವೆ.

'ಕಥಾವಳಿ'ಯಲ್ಲಿ ಮಹಿಳಾ ವಿಭಾಗದ ಸಂಪಾದಕಿಯಾಗಿ ಕೆಲಸ ಮಾಡಿದ ಧೈರ್ಯದ ಮೇಲೆ 'ಸುಪ್ರಭಾತ' ಎಂಬ ಮಹಿಳೆಯರಿಗೇ ಮೀಸಲಾದ ಪತ್ರಿಕೆಯನ್ನು ಹೊರಡಿಸುವ ಧೈರ್ಯ ಮಾಡಿದರು. ಪತ್ರಿಕೆಯ ಸಂಪುಟಕ್ಕೆ 'ಕಮಲ' ಎಂದೂ, ಸಂಚಿಕೆಗೆ 'ದಳ' ಎಂದೂ ಹೊಸ ರೀತಿ ಕರೆದಿದ್ದಾರೆ. ಕತೆ, ಕವನ, ನಾಟಕ, ಲೇಖನ, ಓಲೆಗಳಿಗೆ ಉತ್ತರ, ಅಡುಗೆ ಬಗ್ಗೆ ತಿಳಿಸುವ 'ಏನು ಅಡಿಗೆ?', ಬಾಲಕಿಯರನ್ನು ತಿದ್ದಲು 'ಬಾಲಕಿಯರ ಬೊಕ್ಕಸ,' ಒಗಟುಗಳು, ಹೊಸ ಪುಸ್ತಕಗಳ ಪರಿಚಯ, ವಿಮರ್ಶೆ ಈ ಪತ್ರಿಕೆಯಲ್ಲಿರುತ್ತಿತ್ತು.

'ಸುಪ್ರಭಾತ'ದ ಮೊದಲ ಸಂಚಿಕೆಯಲ್ಲಿ ಹೇಳಿರುವ ಮಾತುಗಳಿವು: "ಸ್ತ್ರೀ ಪುರುಷ ಸಮೂಹದಿಂದ ಸಮಾಜ, ಸಮಾಜದಿಂದ ನಾಡು ಎಂದಿರುವಾಗ ಏಕಮುಖೀ ಸಾಹಿತ್ಯದಿಂದ ಸಮಾಜದ ಸರಿಯಾದ ಚಿತ್ರಣವಾಗಬಲ್ಲುದೇ? ಕೇವಲ ಪುರುಷ ರಚಿತ ಸಾಹಿತ್ಯದಿಂದ ಸಮಾಜದ ಆತ್ಮದರ್ಶನವಾಗಬಲ್ಲುದೆ?" ಎಂಬ ಪ್ರಶ್ನೆಗಳಿಗೆ ಅವರು ಉತ್ತರಿಸಿರುವುದು ಹೀಗೆ: "ಎಂದಿಗೂ ಇಲ್ಲ. ಮಹಿಳೆಯರೂ ಆ ಕ್ಷೇತ್ರದಲ್ಲಿ ಪರಿಶ್ರಮಿಸಬೇಕು. ಅವರ ಹೃದಯದ ಆಸೆ ಆಕಾಂಕ್ಷೆಗಳನ್ನು, ಒಲವು-ನಲಿವುಗಳನ್ನು, ಬೇಕು-ಬೇಡಗಳನ್ನು ಅವರೇ ಯಥಾರ್ಥವಾಗಿ ಚಿತ್ರಿಸಬಲ್ಲರು" (ಸುಪ್ರಭಾತದ ಸಂಪಾದಕೀಯ 1952). ಆದ್ದರಿಂದಲೇ ಸುಪ್ರಭಾತ ಪತ್ರಿಕೆ ತರಲು ನಿರ್ಧರಿಸಿದುದಾಗಿ ಹೇಳಿದ್ದಾರೆ. ಮಹಿಳೆಯ ಉನ್ನತಿ, ಪ್ರಗತಿಯ ಸಾಧನೆ ಮಹಿಳೆಯಿಂದಲೇ ಆಗಬೇಕು. ಆದರೆ ಅವರ ಕೆಲಸಕ್ಕೆ ಪುರುಷರ ಸಹಕಾರ ಬೇಕು. ಮಹಿಳೆ ತನ್ನ ಪ್ರಗತಿಗೆ ತಾನೇ ಪ್ರಯತ್ನಿಸಬೇಕಲ್ಲದೆ ಪುರುಷ ರನ್ನವಲಂಬಿಸಿದರೆ ಆಗುವುದಿಲ್ಲ ಎಂಬುದು ಅವರ ಸ್ಪಷ್ಟ ಅಭಿಪ್ರಾಯ ವಾಗಿತ್ತು.

ಚಂದಾದಿಂದಲೇ ಪತ್ರಿಕೆ ನಡೆಯಬೇಕೆಂಬುದು ಇವರ ಹಠವಾಗಿತ್ತು. ಚಂದಾ ದೊರೆಯುವುದು ಕಷ್ಟವಾಗಿತ್ತು. ಒಂದು ವರ್ಷ ಸುವ್ಯವಸ್ಥಿತವಾಗಿ ನಡೆದ ಪತ್ರಿಕೆ ಆರ್ಥಿಕ ಮುಗ್ಗಟ್ಟಿನಿಂದ ನಿಂತಿತು. ಹನ್ನೆರಡನೇ ದಳದೊಂದಿಗೆ ಸುಪ್ರಭಾತ ಅಸ್ತಂಗತವಾಗಿದೆ. ಜತೆಗೆ ಇವರು ತುಂಬ ಗೌರವಿಸುತ್ತಿದ್ದ ಗೋವಿಂದ ಪೈಗಳು ರಚನಾ ಶಕ್ತಿ ಇರುವವರು ಪತ್ರಿಕೋದ್ಯಮಕ್ಕೆ ಕೈಹಾಕ ಬಾರದು ಎಂದು ಎಚ್ಚರಿಕೆ ಕೊಟ್ಟದ್ದೂ ಕೂಡ ಪತ್ರಿಕೆಯನ್ನು ನಿಲ್ಲಿಸಲು ಕಾರಣವಾಗಿರಬಹುದು ಎನ್ನಲಾಗಿದೆ.

"ನಮ್ಮ ಪತ್ರಕರ್ತೆಯರಲ್ಲೇ ರಾಜವಾಡೆ ತಮ್ಮ ವೈವಿಧ್ಯಮಯ ಆಸಕ್ತಿಗಳಿಂದ, ಆಕರ್ಷಕವಾದ ಶೈಲಿಯಿಂದ, ದಿಟ್ಟತನದಿಂದ ವ್ಯುತ್ಪತ್ತಿಯ



ಹರಹಿನಿಂದ, ಕಲ್ಪನಾಶಕ್ತಿ ಮತ್ತು ಹರಿತವಾದ ವೈಚಾರಿಕಶಕ್ತಿಯಿಂದ ಗಮನಾರ್ಹರಾಗಿದ್ದಾರೆ. ಹಿಂದಿ, ಗುಜರಾತಿ, ತಮಿಳು, ಇಂಗ್ಲಿಷ್, ಮರಾಠಿ ಗಳನ್ನು ತಿಳಿದಿದ್ದ ಅವರ ಓದು ಕೂಡ ವಿಶಾಲವಾದ ವಲಯ ದ್ದಾಗಿರುವಂತೆ ತೋರುತ್ತದೆ. ...ಸಾಂಪ್ರದಾಯಿಕ ದೃಷ್ಟಿಕೋನದ ಒತ್ತಡ ಹಾಗೂ ಸ್ವಭಾವತಃ ಬಂದ ವೈಚಾರಿಕ ದೃಷ್ಟಿಕೋನದ ನಡುವಿನ ಸಂಘರ್ಷದಿಂದ ಅವರಲ್ಲಿ ಅನೇಕ ವೈರುಧ್ಯಗಳನ್ನು ಅವರ ಬರಹದ ಬದುಕಿನಲ್ಲಿ ಕಾಣುತ್ತೇವೆ. ಕೆಲವು ಸಾರಿ ಅವರಲ್ಲಿ ತಲೆ ಹಾಕುವ ವೈರುಧ್ಯ, ದ್ವಂದ್ವ, ಅಸಾಂಗತ್ಯಗಳನ್ನು ಬದಿಗಿಟ್ಟು ಇವುಗಳಲ್ಲಿ ಕೆಲವನ್ನು ಅವರ ಸಂದರ್ಭದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಂಡು ಕನ್ನಡ ಪತ್ರಿಕಾಲೋಕಕ್ಕೆ ಅವರು ಸಲ್ಲಿಸಿದ ಕೊಡುಗೆಯನ್ನು ಗಮನಿಸಿದರೆ ಅವರ ವೈಶಿಷ್ಟ್ಯ, ಸಾಧನೆಗಳನ್ನು ಮೆಚ್ಚದಿರುವುದು ಅಸಾಧ್ಯ" (ಡಾ. ವಿಜಯಾದಬ್ಬೆ, 'ಮಹಿಳೆ ಸಾಹಿತ್ಯ ಸಮಾಜ,' ರಚನಾ ಪ್ರಕಾಶನ, ಮೈಸೂರು–1989, ಪುಟ. 102).

ವೀರಕೇಸರಿ ಸೀತಾರಾಮಶಾಸ್ತ್ರಿ ಎಂದೇ ಹೆಸರಾದ ಸೀತಾರಾಮ ಶಾಸ್ತ್ರಿಗಳ ಸಂಪಾದಕತ್ವದ 'ವೀರಕೇಸರಿ' (1929ರ ಜನವರಿಯಲ್ಲಿ ಕೊನೆಯುಸಿರೆಳೆಯಿತು) ಪತ್ರಿಕೆ ಹಿಂದೂಧರ್ಮ ಜಾಗೃತಿ ಮತ್ತು ರಕ್ಷಣೆಯ ಗುರಿ ಇರಿಸಿಕೊಂಡ ಪತ್ರಿಕೆ. ಕ್ರೈಸ್ತಧರ್ಮ ಪ್ರಚಾರದ 'ಮಹಿಳಾ ಸಖಿ', ಎಂಬ ಪತ್ರಿಕೆಗೆ ಪ್ರತಿಯಾಗಿ ಇವರು 1913ರಲ್ಲಿ 'ಆರ್ಯಮಹಿಳಾ' ಎಂಬ ಪತ್ರಿಕೆಯನ್ನು ಆರಂಭಿಸಿದ್ದರು (ಜಿ.ಎನ್. ರಂಗಾನಾಥರಾವ್, ಬೆಂಗಳೂರಿನ ಪತ್ರಿಕಾ ಜಗತ್ತು, ಬೆಂಗಳೂರು ದರ್ಶನ, ಉದಯಭಾನು ಕಲಾ ಸಂಘ, ಪುಟ 632) ಎಂಬಂತಹ ಮಾಹಿತಿ ಇದೆ. ಧರ್ಮದ ನೆಲೆಯಲ್ಲಿ ಮಹಿಳೆಯರನ್ನು ಪ್ರತ್ಯೇಕ ಘಟಕವಾಗಿ ಪರಿಗಣಿಸಿ ತಮ್ಮ ವಿಚಾರಗಳನ್ನು ತಿಳಿ ಹೇಳುವ ಪ್ರಯತ್ನವಿದು.

"ಮಹಿಳೆಯರಿಗೆ ಮೀಸಲಾದ ಪತ್ರಿಕೆಗಳಲ್ಲಿ ಹೆಚ್ಚಿನವು 'ಸ' ಕಾರಾರಂಭ ವಾಗಿರುವುದು ಒಂದು ಸೋಜಿಗ. ಸರಸ್ವತಿ, ಸಹಧರ್ಮಿಣಿ, ಸಾಧ್ವಿ, ಸುಧೇನು, ಸುವಾಸಿನಿ, ಸೋದರಿ. ಹಾಗೆಂದು ಈ ಪತ್ರಿಕೆಗಳಲ್ಲಿ ಮಹಿಳಾ ಲೇಖಕರು, ಮಹಿಳಾ ವಿಷಯಗಳು ಮಾತ್ರವೇ ಇರುತ್ತಿದ್ದವೆಂದೇನೂ ಇಲ್ಲ." (ಸ್ವಾತಂತ್ರ್ಯಪೂರ್ವದ ಪತ್ರಿಕೋದ್ಯಮ ವೈಖರಿ, ಶ್ರೀ.ಹಾ. ಕನ್ನಡ ಪತ್ರಿಕಾ ಸೂಚಿ–1843–1972: ಪುಟ 16).

1900ರಲ್ಲಿ ಪಂಜೆ ಮಂಗೇಶರಾವ್, ಉಳ್ಳಾಲ ಮಂಗೇಶರಾವ್ ಮತ್ತು ಬೋಳಾರ ವಿಠ್ಠಲರಾವ್ ಅವರ ನೇತೃತ್ವದಲ್ಲಿ 'ಸುವಾಸಿನಿ' ಪ್ರಕಟ ವಾಗತೊಡಗಿತು. ಬೆನಗಲ್ ರಾಮರಾಯರು ಇದರ ಸಂಪಾದಕ ರಾಗಿದ್ದರು. ಪತ್ರಿಕೆ ಮಹಿಳೆಯರ ಹಾಗೂ ಮಕ್ಕಳ ಹಿತಸಾಧನೆಗಾಗಿ ಮೀಸಲಾಗಿತ್ತು.

"ಸ್ತ್ರೀಯರಿಗೋಸ್ಕರವಾಗಿಯೇ ಕರ್ನಾಟಕದಲ್ಲಿ ನಂದಿನಿ, ಮಹಿಳಾಸಖಿ ಎಂಬೆರಡು ಪತ್ರಿಕೆಗಳಿರುತ್ತವೆ. ಇವುಗಳಲ್ಲಿ 'ನಂದಿನಿ' ಪತ್ರಿಕೆಯೊಂದು ತನ್ನ ಧ್ಯೇಯಕ್ಕನುರೂಪವಾಗಿ ಚೆನ್ನಾಗಿ ಕೆಲಸ ಮಾಡುತ್ತಿದೆ" ಎಂದು ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ 'ಕನ್ನಡ ಮಾಸಪತ್ರಿಕೆಗಳ ಸದ್ಯಸ್ಥಿತಿ' ಎಂದು 1919ರಲ್ಲಿ ನಾ. ಶ್ರೀ ರಾಜ ಪುರೋಹಿತರು ಬರೆದ ಲೇಖನದಲ್ಲಿ ಹೇಳಿದ್ದಾರೆ. (ಕನ್ನಡ ಪತ್ರಿಕಾ ಸೂಚಿ –1843–1972; ಪುಟ 36).

ಹಿಂದೆ ಮಂಗಳೂರಿನಲ್ಲಿ ಪ್ರಸಿದ್ಧ ಸಾಹಿತಿ ಕಡೆಂಗೋಡ್ಲು ಶಂಕರಭಟ್ಟರು ನಡೆಸುತ್ತಿದ್ದ 'ರಾಷ್ಟ್ರಬಂಧು' (ಪ್ರಾರಂಭ 1928) ಮತ್ತು 'ರಾಷ್ಟ್ರಮತ' ಕನ್ನಡ ಪತ್ರಿಕೆಗಳ ಒಡೆತನವನ್ನು ಪಡೆದ ವೀರರಾಜಪೇಟೆಯ ಕೃಷ್ಣಗಿರಿ ಗೋವಿಂದರಾವ್ ಅವರು 1965ರಲ್ಲಿ ತಮ್ಮ ಸಂಪಾದಕತ್ವದಲ್ಲಿ 'ರಾಷ್ಟ್ರಬಂಧು' ದಿನಪತ್ರಿಕೆಯನ್ನೂ ತಮ್ಮ ಪತ್ನಿ ಕೆ. ಜಯಲಕ್ಷ್ಮಿ ಅವರ ಸಂಪಾದಕತ್ವದಲ್ಲಿ 'ರಾಷ್ಟ್ರಮತ' ವಾರಪತ್ರಿಕೆಯನ್ನೂ ಹೊರಡಿಸಿದರು. ರಾಷ್ಟ್ರಮತವು ಕೊಡಗಿನ ಪ್ರಥಮ ಮಹಿಳಾ ಸಾಪ್ತಾಹಿಕವೆನಿಸಿದೆ. (ಗೆಜೆಟಿಯರ್‌ನಿಂದ; ಕನ್ನಡ ಪತ್ರಿಕಾ ಸೂಚಿ ಸಂ. ಶ್ರೀನಿವಾಸ ಹಾವನೂರ; –1843–1972; ಪುಟ 26).




### ಪತ್ರಿಕೆಗಳಲ್ಲಿ ಮಹಿಳಾ ದನಿ

20ನೇ ಶತಮಾನದ ಆದಿಭಾಗದಲ್ಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಪ್ರಕಟವಾಗುತ್ತಿದ್ದ ಹಲವು ಪತ್ರಿಕೆಗಳಲ್ಲೂ ವಿಭಿನ್ನ ನೆಲೆಗಳಲ್ಲಿ ಮಹಿಳಾ ದನಿಗಳು ದಾಖಲಾಗಿವೆ. ಕವಯಿತ್ರಿ ನೆಲ್ಲಿಕಾರು ಜೈನಮಹಿಳೆ ರಾಧಾಮತಿ (1899–1970) ಅವರ ಕವಿತೆಗಳು 'ಕರ್ನಾಟಕ ಕೇಸರಿ,' 'ಕನ್ನಡ ಸಹಕಾರಿ' ಮೊದಲಾದ ಪತ್ರಿಕೆಗಳಲ್ಲಿ 'ಜೈನ ಮಹಿಳೆ' ನೆಲ್ಲಿಕಾರು ಎಂಬ ಕಾವ್ಯನಾಮದಲ್ಲಿ ಪ್ರಕಟವಾಗುತ್ತಿತ್ತು. ಅನೇಕ ಶಾಲಾ ಪಠ್ಯಗಳಲ್ಲಿ ಇವರ ಕವನಗಳು ಸೇರಿದ್ದವು. 1924, 1926ರಲ್ಲಿ ಪುತ್ತೂರಿನಿಂದ ಪ್ರಕಟವಾಗುತ್ತಿದ್ದ 'ಕರ್ನಾಟಕ ಕೇಸರಿ'ಯಲ್ಲಿ ಅವರ 'ಲಕ್ಷ್ಮೀಬಾಯಿ' ಎಂಬ ಕಾವ್ಯ ಧಾರಾವಾಹಿಯಾಗಿ ಬರುತ್ತಿತ್ತಂತೆ.

ನಾಟಕ, ಪ್ರಹಸನಗಳನ್ನ ಬರೆದ ಸೀತಾದೇವಿ ಪಡುಕೋಣೆ (1903–1969) ಅವರು 1929ರಲ್ಲಿ 'ರಾಷ್ಟ್ರಬಂಧು' ಯುಗಾದಿ ಸಂಚಿಕೆಯಲ್ಲಿ 'ಚಿಕ್ಕ ಕಥೆಗಳ ಸಾಮ್ರಾಜ್ಯ' ಎಂಬ ಲೇಖನವನ್ನು ಪ್ರಕಟಿಸಿದ್ದರು. ಕನ್ನಡದಲ್ಲಿ ಸಣ್ಣಕತೆಗಳು ಏಕೆ ಜನಪ್ರಿಯವಾಗಿಲ್ಲ ಎಂಬುದರ ಕಾರಣಗಳನ್ನು ಅವರು ಈ ಲೇಖನದಲ್ಲಿ ಶೋಧಿಸಿದ್ದಾರೆ.

ಭಾರತಿಬಾಯಿ ಪಣಿಯಾಡಿ (1910–1945) ಅವರ ಪತಿ ಶ್ರೀನಿವಾಸ ಉಪಾಧ್ಯಾಯ ಪಣಿಯಾಡಿ ಅವರು ಉಡುಪಿಯ 'ಅಂತರಂಗ' ವಾರಪತ್ರಿಕೆಯ ಸಂಪಾದಕ, ಪ್ರಕಾಶಕರಾದಾಗ ಭಾರತೀಬಾಯಿಯವರ ಸಾಹಿತ್ಯಾಸಕ್ತಿಗೆ ಉತ್ತೇಜನ ಸಿಕ್ಕಂತಾಯಿತು. 'ಅಂತರಂಗ' ಪತ್ರಿಕೆಯ ಸಲಹೆಗಾರ ಮಂಡಲಿಯಲ್ಲಿ ಅವರ ಹೆಸರು ಇತ್ತು. ಜೊತೆಗೆ ಆ ಪತ್ರಿಕೆಯಲ್ಲಿ ಅವರ ಕಥೆ, ಲೇಖನಗಳೂ ಪ್ರಕಟವಾಗಿದ್ದವು.

ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲಿ ಲೇಖಕಿಯಾಗಿ ಗುರುತಿಸಲ್ಪಟ್ಟಿದ್ದ ಉಡುಪಿಯ ಮಟ್ಪಾಡಿ ಕಮಲಾಕ್ಷಿ ಅವರಿಗೆ ಬೆಂಗಳೂರಿನ ಖ್ಯಾತ ಪತ್ರಕರ್ತೆ ಲೇಖಕಿ ಆರ್. ಕಲ್ಯಾಣಮ್ಮನವರ ನಿಕಟ ಸ್ನೇಹವಿತ್ತು. ಕಲ್ಯಾಣಮ್ಮನವರ 'ಸರಸ್ವತಿ' ಪತ್ರಿಕೆಯಲ್ಲಿ ಕಮಲಾಕ್ಷಮ್ಮ ವಿವಿಧ ಲೇಖನ ಗಳನ್ನು ಬರೆದಿದ್ದಾರೆ. 'ವತ್ಸಲಾ' ಎಂಬ 66 ಪುಟಗಳ ಸಾಮಾಜಿಕ ಕಿರುಕಾದಂಬರಿಯನ್ನು ಬರೆದಿದ್ದಾರೆ. (ಈ ಪುಸ್ತಕ ಲಭ್ಯವಾಗಿಲ್ಲ). ಆದರೆ ಉಡುಪಿಯ 'ನವಯುಗ' ಮತ್ತು 'ಅಂತರಂಗ' ವಾರಪತ್ರಿಕೆಗಳಲ್ಲಿ ಈ ಕಿರುಕಾದಂಬರಿಯ ಜಾಹೀರಾತು ಪ್ರಕಟವಾಗಿದೆ. (ಇದು 1937ಕ್ಕಿಂತ ಮುಂಚೆಯೇ ಪ್ರಕಟವಾಗಿರಬೇಕು). ಒಂದು ಜಾಹೀರಾತಿನಲ್ಲಿ ಈ ಕಾದಂಬರಿಯ ಬಗ್ಗೆ ಹೀಗೆ ಬರೆಯಲಾಗಿದೆ. 'ಸ್ತ್ರೀಯರಿಗೆ ವಿದ್ಯಾಭ್ಯಾಸ ವಿಲ್ಲದಿರುವ ಪರಿಣಾಮವನ್ನು 'ಸ್ತ್ರೀ ಪುರುಷ ಹೃದಯಗಳ ಪರಿಚಯವನ್ನು ಸೊಗಸಾಗಿ ಚಿತ್ರಸಿದ ಕಾದಂಬರಿ' ಎಂದು. ಇನ್ನೊಂದು ಜಾಹೀರಾತಿನಲ್ಲಿ

'ನಾಡಸೋದರಿಯರ ನೈಜ ಜೀವನದ ದುರಂತ ಚಿತ್ರವನ್ನು ಸ್ತ್ರೀ ಪುರುಷ ಹೃದಯಗಳ ಆಳವನ್ನು ಹೃದಯಂಗಮವಾಗಿ ಚಿತ್ರಿಸುವ ರಮ್ಯ ಕಥಾನಕ' ಎಂದು ಬರೆಯಲಾಗಿದೆ. (ಡಾ. ಎಲ್.ಜಿ. ಮೀರಾ–ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ; ಸಂ: ಡಾ. ಎಚ್.ಎಸ್. ಶ್ರೀಮತಿ; ಪುಟ 258).

ಇಪ್ಪತ್ತನೇ ಶತಮಾನದ ಆದಿ ಭಾಗದಲ್ಲಿ ಉಡುಪಿಯ 'ಅಂತರಂಗ' ವಾರಪತ್ರಿಕೆ, 'ನವಯುಗ' ವಾರಪತ್ರಿಕೆ ಹಾಗೂ 'ಧುರೀಣ' ಮಾಸಪತ್ರಿಕೆಗಳು ಲೇಖಕಿಯರ ಕಥೆಗಳ ಪ್ರಕಟಣೆಗೆ ವೇದಿಕೆಯಾಗಿದ್ದವು ಎಂಬುದು ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆಯ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಇಪ್ಪತ್ತನೇ ಶತಮಾನದ ಆದಿಭಾಗದಲ್ಲೇ ಉಡುಪಿಯಲ್ಲಿ ನೆಲೆಸಿದ್ದ ಕಥೆಗಾರ್ತಿ ಕೃಷ್ಣವೇಣಿ ಬಾಯಿ ಕೆ.ವಿ. ಅವರು ಒಳ್ಳೆಯ ಪತ್ರಿಕೆಯೊಂದನ್ನು ಹೊರಡಿಸುವ ಕನಸು ಕಾಣುತ್ತಿದ್ದರು ಎಂಬಂತಹ ಮಾಹಿತಿ ಲಭ್ಯವಿದೆ. ಆದರೆ ಚಿಕ್ಕ ವಯಸ್ಸಿನಲ್ಲೇ ಆಕೆ ಕ್ಷಯ ರೋಗದಿಂದ ತೀರಿಕೊಂಡರು. ಇವರ ಕಥೆಗಳು ಮೇಲೆ ಹೆಸರಿಸಿದ ಪತ್ರಿಕೆಗಳಲ್ಲಿ ಪ್ರಕಟವಾಗಿದೆ.

'ಕಂಠೀರವ' ದಸರಾ ವಿಶೇಷಾಂಕದಲ್ಲಿ ಆರ್. ಸತ್ಯಭಾಮಾದೇವಿಯವರ 'ಮೀನಾಕ್ಷಿ ಮನೋವ್ಯಾಧಿ' ಕಥೆ ಪ್ರಕಟವಾಗಿದೆ. ಆದರೆ ಇಸವಿ ಇತ್ಯಾದಿ ವಿವರಗಳಿಲ್ಲ.

1928ರ ಸುಮಾರಿಗೆ 'ರಾಷ್ಟ್ರಬಂಧು' ಪತ್ರಿಕೆಯು ಕಡಂಗೋಡ್ಲು ಶಂಕರಭಟ್ಟ ಅವರ ಸಂಪಾದಕತ್ವದಲ್ಲಿ ಹೊರಬರುತ್ತಿತ್ತು. ಈ ಪತ್ರಿಕೆಯಲ್ಲಿ ವಾಸಂತಿಬಾಯಿ ಪಡುಕೋಣೆ (1908–1955) ಅವರ ಪತಿ ಪಡುಕೋಣೆ ಶಿವಶಂಕರರಾವ್ ಉಪಸಂಪಾದಕರಾಗಿದ್ದರು. ಇದೇ ಸಂದರ್ಭದಲ್ಲಿಯೇ ವಾಸಂತಿಯವರೂ ಈ ಪತ್ರಿಕೆಗೆ ತಪ್ಪದೆ ಅನುವಾದ ಕಥೆ, ಆತ್ಮಚರಿತ್ರೆ ಹೀಗೆ ಬೇರೆ ಬೇರೆ ಪ್ರಕಾರಗಳಲ್ಲಿ ಬರೆದರು.

'ನನ್ನ ಜೀವನದ ಹೋರಾಟ' ಹಾಗೂ 'ನನ್ನ ಮಗ ಗುರುದತ್ತ' ಎಂಬ ಎರಡು ಆತ್ಮಕಥಾನಕಗಳನ್ನೂ ಬರೆದಿರುವ ವಾಸಂತಿಯವರಿಗೆ ಬಂಗಾಳಿ, ಹಿಂದಿ, ಇಂಗ್ಲಿಷ್, ಕೊಂಕಣಿ, ಮರಾಠಿ ಭಾಷೆಗಳ ಹಿಡಿತವಿತ್ತು. ಹೀಗಾಗಿ ಅನುವಾದಗಳನ್ನು ಮಾಡುತ್ತಿದ್ದರು. ಸ್ವಂತ ಬರಹಗಳನ್ನು ಕನ್ನಡವಲ್ಲದೆ ಬೇರೆ ಭಾಷೆಗಳಲ್ಲೂ ಬರೆಯುತ್ತಿದ್ದರು. ಹಿಂದಿ ಚಲನಚಿತ್ರಗಳಿಗೆ ಚಿತ್ರಕಥೆ ಸಂಭಾಷಣೆ ಬರೆಯುತ್ತಿದ್ದರು. ಅವರ ದಿನಚರಿ ಇಂಗ್ಲಿಷ್ನಲ್ಲಿರುತ್ತಿತ್ತು.

ಇದೇ 'ರಾಷ್ಟ್ರಬಂಧು' ಪತ್ರಿಕೆಗಾಗಿ ಲೇಖನಗಳನ್ನು ಬರೆಯುವ ಮೂಲಕ ಬರವಣಿಗೆ ವ್ಯವಸಾಯ ಆರಂಭಿಸಿದ ಲಲಿತಾ ರೈ (1928) ನಂತರ 'ಅರುಣ' ಪತ್ರಿಕೆಗೆ ಸಣ್ಣ ಕಥೆಗಳನ್ನು ಬರೆದರು.

ಚಂದ್ರಭಾಗಿ ಕೆ ರೈ (1916) ಅವರು 30ಕ್ಕೂ ಮೀರಿದ ಲೇಖನಗಳನ್ನು ಪ್ರಕಟಿಸಿದ್ದಾರೆ. ಅವು ಆ ಕಾಲದ 'ಸರ್ವೋದಯ,' 'ಜ್ಯೋತಿ,' 'ನವಭಾರತ,' 'ನವಯುಗ,' 'ರಾಯಭಾರಿ,' 'ಪ್ರಪಂಚ' ಮೊದಲಾದ ಪ್ರಸಿದ್ಧ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಐತಿಹಾಸಿಕ ಲೇಖನ, ಸಾಮಾಜಿಕ ಲೇಖನ, ಸ್ಥಳಪುರಾಣ, ಜಾನಪದ ಸಂದರ್ಶನ ಹೀಗೆ ವೈವಿಧ್ಯಮಯ ವಿಚಾರಗಳ ಬಗ್ಗೆ ಚಂದ್ರಭಾಗಿ ಬರೆದಿದ್ದಾರೆ. ಸ್ತ್ರೀ ವಿದ್ಯಾಭ್ಯಾಸ, ಹರಿಜನೋದ್ಧಾರ, ವರದಕ್ಷಿಣೆ ಮುಂತಾದವುಗಳ ಬಗ್ಗೆ ವೈಚಾರಿಕ ಲೇಖನಗಳನ್ನೂ ಬರೆದಿದ್ದಾರೆ.

ಆನಂದಿ ಸದಾಶಿವರಾವ್ (1926) ಅವರು ಬರೆದ ಅನೇಕ ಕತೆಗಳು, ಲೇಖನಗಳು ಕರ್ನಾಟಕದ ಪ್ರಸಿದ್ಧ ಮಾಸಪತ್ರಿಕೆ, ಸಾಪ್ತಾಹಿಕಗಳಲ್ಲಿ ಪ್ರಕಟವಾಗಿವೆ, ಇವರು ಬರೆದ ಪ್ರಥಮ ಕಥೆ 'ಗೆದ್ದವರು ಯಾರು' ಉಷಾ ಪತ್ರಿಕೆಯಲ್ಲಿ ಪ್ರಕಟವಾಯಿತು. ನಂತರ ಇವರು ಬರೆದ ಕಥೆಗಳು ಲೇಖನಗಳು 'ಜನಪ್ರಗತಿ,' 'ಕಥಾವಳಿ,' 'ಪ್ರಜಾಮತ,' 'ಉಷಾ' 'ಕರ್ಮವೀರ', 'ನವಭಾರತ,' 'ಚಿತ್ರಗುಪ್ತ,' 'ಸಚೇತನ,' 'ರಾಯಭಾರಿ,' 'ನವಯುಗ,' 'ರಾಷ್ಟ್ರಬಂಧು' ಮುಂತಾದ ಪತ್ರಿಕೆಗಳಲ್ಲಿ ಸುಮಾರು ಎರಡು ದಶಕಗಳ ಕಾಲ ಪ್ರಕಟವಾಗಿವೆ.

ಲೀಲಾಬಾಯಿ ಕಾಮತ್ (1911) ಅವರು ಅನುವಾದ ಕತೆಗಳ ಮೂಲಕ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದರು. 'ಸ್ವದೇಶಾಭಿಮಾನಿ' ಪತ್ರಿಕೆಯಲ್ಲಿ (1940ರ ಆಗಸ್ಟ್ 2) ಪ್ರಕಟವಾದ ವಿಶ್ವಾಸಘಾತ ಅವರ ಮೊದಲ ಅನುವಾದ ಕತೆ. ಇದರ ನಂತರ ಅವರು ನೂರಕ್ಕೂ ಮಿಕ್ಕಿ ಅನ್ಯಭಾಷಾ ಕತೆಗಳನ್ನು ಅನುವಾದಿಸಿದ್ದಾರೆ. ಅವುಗಳಲ್ಲಿ ಸುಮಾರು 70ರಷ್ಟು ಕತೆಗಳು ಕರ್ನಾಟಕದ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

"ಅಂದು ನಾನು ಕನ್ನಡ ಪತ್ರಿಕೆ ಅಥವಾ ಪುಸ್ತಕಗಳನ್ನು ಓದುತ್ತಿದ್ದುದಕ್ಕಿಂದ ಹೆಚ್ಚಾಗಿ ಹಿಂದಿ, ಮರಾಠಿ ಭಾಷಾ ಪತ್ರಿಕೆಗಳನ್ನು ಓದುತ್ತಿದ್ದೆ. ಅಲ್ಲಿ ಓದಿದ ಅತ್ಯುತ್ತಮ ಕತೆಗಳನ್ನು ಕನ್ನಡಿಗರಿಗೂ ಪರಿಚಯಿಸಿ ಕೊಡಬಹುದಲ್ಲ ಎಂಬ ಉದ್ದೇಶದಿಂದ ಅನುವಾದ ಕಾರ್ಯವನ್ನು ಕೈಗೊಂಡೆ. ಆ ಕಾಲದಲ್ಲಿ ಅನುವಾದ ಮಾಡಿ ಪ್ರಕಟಿಸಬೇಕಾದರೆ ಮೂಲ ಲೇಖಕರ ಒಪ್ಪಿಗೆ ಅನಿವಾರ್ಯವಾಗಿರಲಿಲ್ಲ" ಎಂದು ಅವರು ಹೇಳಿಕೊಂಡಿದ್ದಾರೆ. (ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ; ಪುಟ 264)

## ಅಭಿವ್ಯಕ್ತಿ ಪಡೆದ ಸ್ತ್ರೀ ವಿಚಾರಗಳು

ಸ್ವಾತಂತ್ರ್ಯ ಪೂರ್ವ ಪತ್ರಿಕೋದ್ಯಮದಲ್ಲಿ ಲೋಕಶಿಕ್ಷಣದ ಧ್ಯೇಯೋದ್ದೇಶವೂ ಇದ್ದುದರಿಂದ ಸ್ತ್ರೀಯರ ಏಳ್ಗೆ ಕುರಿತಾದ ಬರಹಗಳು ಸಾಕಷ್ಟು ಪ್ರಕಟವಾಗಿವೆ.

ವಿಧವಾ ವಿವಾಹ, ಬಾಲ್ಯವಿವಾಹ ನಿಷೇಧ, ಶಾಲಾ ಶಿಕ್ಷಣ – ಇವು ಒಂದೊಂದರ ಕುರಿತೂ ಪತ್ರಿಕೆಗಳಲ್ಲಿ ವಿಶೇಷವಾಗಿ ಇಂಬು ದೊರೆಯಿತು. ವೆಂಕಟ ರಂಗೋ ಕಟ್ಟಿಯವರು ವಿಧವಾವಿವಾಹ ನಿಷಿದ್ಧವೆಂದು ತೋರಿಸಿದವರಿಗೆ, ವಿಧವಾ ಕೇಶಮುಂಡನವು ಶಾಸ್ತ್ರದಲ್ಲಿ ಹೇಳಿಲ್ಲವೆಂದು ತೋರಿಸಿ ಬರೆದವರಿಗೆ ಬಹುಮಾನ ಕೊಡುವುದಾಗಿ ಸಾರಿದ್ದರು. ಸಾರಸ್ವತ ಸಮಾಜದವರೂ ಈ ವಿಷಯದಲ್ಲಿ ಪ್ರಗತಿಪರ ನಿಲುವನ್ನು ತಳೆದರು. ಉಡುಪಿಯ 'ಸುದರ್ಶನ' ಪತ್ರಿಕೆಯಲ್ಲಿ ಸ್ತ್ರೀ ಶಿಕ್ಷಣದ ಕುರಿತು ಒಂದು ಲೇಖನ ಬಂದಿದ್ದು (ಫೆಬ್ರವರಿ 1896) ಅದರ ಕೆಲವು ಅವತರಣಿಕೆಗಳಿವು:

'ಸ್ತ್ರೀ ವಿದ್ಯಾ ಕುರಿತು ನಮ್ಮ ಜಿಲ್ಲೆಯಲ್ಲಿ ತಕ್ಕಮಟ್ಟಿಗೆ ಅಲಕ್ಷ್ಯ ಕೊಡೋಣವಾಗುತ್ತದೆ. ಮಂಗಳೂರಿನ ಓರ್ವ ವಕೀಲರ ಮಗಳು ಪಾರ್ವತಿ ಮಿಡ್ಲ್‌ಸ್ಕೂಲ್ ಪರೀಕ್ಷೆಯನ್ನೇನೋ ಪಾಸಾದಳು. ಆಮೇಲೆ ಶ್ರೀಮಂತ ಗಂಡನ ಕೈಹಿಡಿದು ವಿದ್ಯಾಭ್ಯಾಸ ಬಿಟ್ಟುಬಿಟ್ಟಳು. ಸ್ತ್ರೀಯರು ವಿದ್ಯಾಲಂಕೃತರಾದರೆ ಅವರ ಒಡಹುಟ್ಟಿದವರಿಗೂ ಒಡೆಯರುವವರಿಗೂ ಆನಂದಕರ ಮತ್ತು ಶ್ರೇಯಸ್ಕರ. ಈ ಮಾತಿಗೆ ವಿರೋಧವಾಗಿ ಕನ್ನಡದಲ್ಲಿ ಒಂದು ಉಪನ್ಯಾಸವನ್ನು ತಯಾರಿಸಿ ಕಳುಹಿಸಿದವರಿಗೆ ಬರುವ ಏಪ್ರಿಲ್ ತಿಂಗಳಲ್ಲಿ 5 ರೂ. ಬಹುಮಾನ ಕೊಡುವೆವು. ಅದರಲ್ಲಿ ಸ್ತ್ರೀಯರು ವಿದ್ಯೆ ಕಲಿಯಲಿಕ್ಕೆ ಏನೂ ಯೋಗ್ಯರಲ್ಲವೆಂಬುದಕ್ಕೆ ಕಾರಣಗಳೂ ಉದಾಹರಣೆಗಳೂ ಕೊಟ್ಟು ತೋರಿಸಬೇಕು' (ಕನ್ನಡ ಪತ್ರಿಕಾ ಸೂಚಿ (1843–1972)–ಸಂಪಾದಕರು: ಡಾ. ಶ್ರೀನಿವಾಸ ಹಾವನೂರ; ಪುಟ. 21).

*(ಮುಂದುವರಿಯುವುದು)*

**ಓದುಗರಲ್ಲಿ ಮನವಿ**

ಜಾಗತೀಕರಣದ ಇಂದಿನ ಸಂದರ್ಭದಲ್ಲಿ 'ನಮ್ಮ ಮಾನಸ'ದಂತಹ ಸಣ್ಣ ಪತ್ರಿಕೆಗೆ ಓದುಗರೇ ಜೀವಾಳ. ಪತ್ರಿಕೆಗೆ ಚಂದಾದಾರರಾಗುವ ಮೂಲಕ ಹಾಗೂ ಈ ವರ್ಷದ ಚಂದಾ ನವೀಕರಿಸುವ ಮೂಲಕ ಪತ್ರಿಕೆಯ ಪ್ರಕಟಣೆಗೆ ಸಹಕಾರ ನೀಡಿ




# ಬಿದಿರಿನ ಬುಟ್ಟಿ

■ ಊರ್ಮಿಳಾ ಪವಾರ್

*ಅನು: ಮಂಗ್ಳೂರ ವಿಜಯ*

*(ಹಿಂದಿನ ಸಂಚಿಕೆಯಿಂದ)*

ಧರ್ಮಾಂತರ ದಿನ ಹಾಗೂ ಅಂಬೇಡ್ಕರ್ ಪರಿನಿರ್ವಾಣ ದಿನಗಳಂದು ಅಲ್ಲಲ್ಲಿ ವಿಶಾಲ ಸಮಾವೇಶಗಳನ್ನು ಸಂಘಟಿಸಲು ಸಲಹೆ ನೀಡುತ್ತಿದ್ದರು. ಈ ವಾತಾವರಣದಲ್ಲಿ, ನಮ್ಮ ಭಾಗದಲ್ಲಿ ದಲಿತರ ಸ್ಥಿತಿ ಉತ್ತಮಗೊಳ್ಳಲಾರಂಭಿಸಿತು; ಮೂಢನಂಬಿಕೆಗಳು ಕಡಿಮೆಯಾದವು; ದಲಿತರು ಸಂಘಟಿತರಾಗತೊಡಗಿದರು; ತಮ್ಮ ಮಕ್ಕಳನ್ನು ಶಾಲೆಗೆ ಸೇರಿಸತೊಡಗಿದರು; ಸರ್ಕಾರಿ ಯೋಜನೆಗಳ ಪ್ರಯೋಜನವನ್ನು ಪಡೆದುಕೊಳ್ಳತೊಡಗಿದರು; ಬೌದ್ಧ ಧರ್ಮದ ಕಡೆಗೆ ಒಲಿಯುತ್ತಾ ಬಂದಂತೆ ಜನ್ಮ, ಮದುವೆ, ಮೃತ್ಯು, ಮುಂತಾದ ಸಂದರ್ಭಗಳಲ್ಲಿ ಬೌದ್ಧ ವಿಧಿಗಳು ಆಚರಣೆಗೆ ಬಂದವು.

ನಮ್ಮ ತಂದೆಯ ಅಕ್ಕನ ಮಗಳ ಮದುವೆ ಬೌದ್ಧ ವಿಧಿಯಂತೆ ನಡೆಯಿತು. ಮದುಮಕ್ಕಳಿಗೆ ಅರಿಷಿಣ ಹಚ್ಚಲಿಲ್ಲ; ಬಾಸಿಂಗ ಇರಲಿಲ್ಲ; ವಾದ್ಯ ಇರಲಿಲ್ಲ; ಅದೊಂದು ಹೊಸ ರೀತಿಯ ಮದುವೆಯಾಗಿತ್ತು. ತಂದಿದ್ದ ಮೈಕ್ ನಮ್ಮಲ್ಲಿ ಆಶ್ಚರ್ಯವನ್ನು ತಂದಿತ್ತು. ಬೌದ್ಧ ಭಿಕ್ಕುಗಳು ಮಾತ್ರ ಕಾವಿ ವಸ್ತ್ರ ಧರಿಸಿ, ಇನ್ನಿತರರೆಲ್ಲರೂ (ವಧು–ವರ ಸೇರಿ) ಶುಭ್ರ ಬಿಳಿ ವಸ್ತ್ರ ಧರಿಸಿದ್ದರು. ತ್ರಿಶರಣ–ಪಂಚಶೀಲ ನಡೆದವು. ವಧು–ವರರು ಪರಸ್ಪರರಿಗೆ ಹಾರ ಹಾಕಿ, ಉಂಗುರ ಬದಲಾಯಿಸಿಕೊಂಡು ಪ್ರತಿಜ್ಞೆಗಳನ್ನು ಮಾಡಿದರು. ಅಲ್ಲಿಗೆ ಮದುವೆ ಮುಗಿಯಿತು. ಬಂದವರೆಲ್ಲರೂ ಊಟದ ಕಡೆ ಗಮನ ನೀಡಿದರು.

* * *

ನಾನು 8ನೇ ತರಗತಿಗೆ ಶಿರ್ಕೆ ಪ್ರೌಢಶಾಲೆ ಸೇರಿದೆ. ನನ್ನ ಅಣ್ಣ ಶಾಹು ಇಲ್ಲೇ ಓದಿ, ಮೆಟ್ರಿಕ್ ಮೊದಲ ದರ್ಜೆಯಲ್ಲಿ ಪಾಸ್ ಮಾಡಿ, ಮುಂಬಯಿ ಸಿದ್ಧಾರ್ಥ ಕಾಲೇಜ್‌ನಲ್ಲಿ ಪ್ರವೇಶ ಪಡೆದಿದ್ದ. ಬಾಬಾಸಾಹೇಬರ ಮನೆ 'ರಾಜ ಗೃಹ'ದ ಹತ್ತಿರದಲ್ಲೇ ಇದ್ದ ಹಾಸ್ಟೆಲ್ ಸೇರಿದ್ದ.

ಆದರೆ ಅಲ್ಲಿ ಅವನಿಗೆ ಯಾರೂ ಪರಿಚಯವಿರಲಿಲ್ಲ. ಮಹಾನಗರದ ವ್ಯವಹಾರಗಳು ಗೊತ್ತಿರಲಿಲ್ಲ. ಮಾರ್ಗದರ್ಶನ ಇರಲಿಲ್ಲ. ಹಾಗಾಗಿ, ಆ ವರ್ಷ ಅವನು ಫೇಲಾಗಿ ಊರಿಗೆ ಬಂದ. ಮತ್ತೆ ಅಲ್ಲಿಗೆ ಹೋಗಲಿಲ್ಲ.

ಆಗಲೇ ಅವನಿಗೆ ರತ್ನಾಗಿರಿ ಜೈಲಿನಲ್ಲಿ ಕೆಲಸ ಸಿಕ್ಕಿತು. ಹಾಗಾಗಿ ಅವನು ರತ್ನಾಗಿರಿ ಗೋಗಟೆ ಕಾಲೇಜ್ ಸೇರಿದ. ಅಲ್ಲಿ, ಜಾವಡೇಕರ್ ಸರ್ ಪ್ರಿನ್ಸಿಪಾಲ್. ಅವನಿಗೆ ಒಳ್ಳೇ ಮಾರ್ಗದರ್ಶನ ಸಿಕ್ಕಿತು. ಬೇರೆಯವರು ಯಾರೇ ಟೀಕೆ–ಟಿಪ್ಪಣಿ ಮಾಡಿದರೂ ಹೆದರದಿರಲು ಹೇಳಿ, ಪ್ರೋತ್ಸಾಹ ನೀಡಿದರು.

ಶ್ರೀಪತಿ ಕಾಂಬಳೆ ಎಂಬ ಗೆಳೆಯನ ಮಾತು ಕೇಳಿ ನನ್ನ ಅಣ್ಣ ಶಾಹು ತನ್ನ ಹೆಸರು ಬದಲಾಯಿಸಿಕೊಳ್ಳಲು ಮುಂದಾದ. ಅವರಿವರ ಬಳಿ 'ಶ್ಯಾಮ್' ಎಂದು ಹೇಳಿಕೊಂಡ. ತನ್ನ ನೋಟ್ ಪುಸ್ತಕಗಳ ಮೇಲೂ ಇದೇ ಹೆಸರನ್ನು ಬರೆದುಕೊಂಡ. ಜಾವಡೇಕರ್ ಸರ್‌ಗೆ ಈ ವಿಷಯ ತಿಳಿದು, ಶಾಹು ಮಹಾರಾಜರ ಬಗ್ಗೆ ತಿಳಿಸಿದಾಗ ಅವನಿಗೆ ಜ್ಞಾನೋದಯವಾಯಿತು; ಹೆಸರು ಬದಲಾಯಿಸಿಕೊಳ್ಳುವ ಪ್ರಯತ್ನವನ್ನು ಕೈಬಿಟ್ಟ.

* * *

ಎಂಟನೇ ತರಗತಿಯಲ್ಲಿರುವಾಗಲೇ ನನ್ನನ್ನು 'ಕಾಗೆ ಮುಟ್ಟಿತು'. ಮೊದಲು ಹಾಗೆಂದರೇನೆಂಬುದು ತಿಳಿದಿರಲಿಲ್ಲ.

ಆ ದಿನ ಶಾಲೆಯಿಂದ ಬಂದಾಗ ಸಂಕೋಚ ತುಂಬಿತ್ತು. ಲಂಗದಲ್ಲಿ ಮಾತ್ರ ಮಾಡಿಕೊಂಡಿದ್ದೆ ಎಂಬ ಭಾವನೆ. ಮನೆಗೆ ಬಂದಾಗ ಬಾಗಿಲಲ್ಲೇ ಎದುರಾದ ಅಮ್ಮ ಬಾಚಿ ಎಳೆದುಕೊಂಡು ಒಳಗೆ ಕರೆದೊಯ್ದಳು. ಆಕೆಯ ದೃಷ್ಟಿಯೂ ನನ್ನ ಲಂಗದ ಮೇಲೆ ಹರಿದಿತ್ತು.

ಒಳಗೆ ಹೋಗುತ್ತಲೇ ಲಂಗ ಬಿಚ್ಚಲು ಒತ್ತಾಯಿಸಿದಳು. ನನಗೂ ಅದೇ ಬೇಕಾಗಿತ್ತು. ಬಿಚ್ಚಿದೆ. ಲಂಗದ ತುಂಬಾ ರಕ್ತ. ನನಗೆ ಗಾಬರಿಯಾಯಿತು. ಅಳಲಾರಂಭಿಸಿದೆ.

ಅಮ್ಮ ಗದರಿಸಿ 'ಏಯ್ ಸುಮ್ನಿರು, ಅಳುವಂಥಾದ್ದೇನೂ ಆಗಿಲ್ಲ; ಇದೆಲ್ಲಾ ಹುಡುಗಿಯರಿಗೆ ಸಹಜ. ಡ್ರೆಸ್ ಬದಲಾಯಿಸು. ಮೂಲೆಯಲ್ಲಿ ಹೋಗಿ ಕುಳಿತುಕೊ; ಯಾರನ್ನೂ ಮುಟ್ಟಬೇಡ' ಎಂದು ಒಳ ನಡೆದು, ನೀರು ಕಾಯಿಸತೊಡಗಿದಳು.

ಹಿಂದೆ ಅನೇಕ ಗೆಳತಿಯರ ಮನೆಯಲ್ಲಿ 'ಏಯ್ ದೂರ ಇರು; ಒಳಗೆ ಬರಬೇಡ; ಏನನ್ನೂ ಮುಟ್ಟಬೇಡ' ಎಂದು ಹೇಳಿಸಿಕೊಂಡು ಅವಮಾನ ಅನುಭವಿಸಿದ್ದೆ. ಈಗ ಮನೆಯಲ್ಲೂ ಅದೇ ಮಾತುಗಳನ್ನು ಕೇಳುವ ಹಾಗಾಗಿತ್ತು.

ಅಕ್ಕನಿಗೆ ವಿಷಯ ತಿಳಿದಾಗ ಧೈರ್ಯ ತುಂಬಿದಳು. ಅಮ್ಮನಿಗೇ ತಿಳಿ ಹೇಳಿದಳು. 'ಪಾಪ ಮಗು, ನಮಗೆ ಹೇಳಿದ ಹಾಗೆಲ್ಲ ಅವಳಿಗೆ ಹೇಳಬೇಡ; ಕಾಲ ಬದಲಾಗ್ತಿದೆ. ಅವಳು ದೂರ ಕೂಡುವುದೇನೂ ಬೇಡ. ಚೆನ್ನಾಗಿ ಸ್ನಾನ ಮಾಡಿ ಬರಲಿ, ಅಷ್ಟೇ ಸಾಕು. ಇದು ಪುಣ್ಯ–ಪಾಪದ ಸ್ಥಿತಿಯಲ್ಲ... ....' ಆಕೆಯ ಮಾತುಗಳಲ್ಲಿ ಅಪಾರ ಭರವಸೆ ಇತ್ತು.

ಇದನ್ನು ಗೆಳತಿಯರಿಗೆ ತಿಳಿಸಲು ನಾಚಿಕೆ ಅಡ್ಡ ಬರುತ್ತಿತ್ತು. ಈ ಬಗ್ಗೆ ನನ್ನ ವಾರಿಗೆಯ ಹುಡುಗಿಯರು ಚರ್ಚಿಸುತ್ತಿದ್ದೆವು. ದೊಡ್ಡವರಾಗುವುದು ನಮಗಾರಿಗೂ ಬೇಕಿರಲಿಲ್ಲ; ವಯಸ್ಸಿನ ಗುರುತು ಕಾಣದಿರಲು ಏನೇನೋ ಮಾಡುತ್ತಿದ್ದೆವು.

ಮುಟ್ಟಾಗಲಾರಂಭಿಸಿದ ಮೇಲೆ ನಮ್ಮ ಮೇಲೆ ತಂದೆ–ತಾಯಿ–ಬಂಧುಗಳು ಹತ್ತಾರು ಬಂಧನಗಳನ್ನು ಹೇರಲಾರಂಭಿಸಿದರು. ಅದನ್ನು ಮಾಡಬೇಡ; ಇದನ್ನು ಮುಟ್ಟ ಬೇಡ; ಅವರ ಜೊತೆ ಹೋಗಬೇಡ; ಇವರ ಜೊತೆ ಇರಬೇಡ. ಎಲ್ಲವೂ 'ಬೇಡ'ಗಳೇ.

ನನ್ನಲ್ಲಿ ಆದ ಈ ದೈಹಿಕ ಬದಲಾವಣೆ ಬೇರೆಯವರಿಗೆ ತಿಳಿಯಿತೋ ಎಂಬಂತೆ, ಊರಿನ ಅನೇಕ ಜನರು ನನ್ನೊಂದಿಗೆ ವರ್ತಿಸುವ ರೀತಿ ನನಗೆ ಆಶ್ಚರ್ಯವನ್ನುಂಟು ಮಾಡಿತು. ಹಿರಿಯ ಹೆಂಗಸರು 'ಏನೇ ದೊಡ್ಡವಳಾಗಿಬಿಟ್ಟಿಯಾ?' ಎಂದು ವಾತ್ಸಲ್ಯ ಮತ್ತು ಕೊಂಕು ಮಿಶ್ರಿತ ದನಿಯಲ್ಲಿ ವಿಚಾರಿಸಿದರೆ, ನನ್ನ ಅಕ್ಕಂದಿರ ವಯಸ್ಸಿನವರು ಮೊದಲಿಗಿಂತ ಹೆಚ್ಚಿನ ಆತ್ಮೀಯತೆ–ಕಕ್ಕುಲತೆಯಿಂದ ಮಾತಾಡಿಸತೊಡಗಿದರು.

ಊರಿನ ವಾರಿಗೆಯ ಹುಡುಗರು ಮತ್ತು ತರಗತಿಯ ಹುಡುಗರು ಮಾತ್ರ ವಿಚಿತ್ರ ನೋಟ ಬೀರುತ್ತಿದ್ದುದನ್ನು ಗಮನಿಸಿದೆ. ನೆಂಟರ ಮನೆ ಹುಡುಗರು ನಮ್ಮ ಮನೆಗೆ ಬಂದಾಗಲಲ್ಲ ವಿಶೇಷ ದೃಷ್ಟಿ ಹರಿಸುತ್ತಿದ್ದರು. ಓಣಿಯ ಹುಡುಗರು 'ಸೀಬೇಕಾಯಿ ಕಿತ್ತು ಕೊಡ್ತೀನಿ; ತೋಟಕ್ಕೆ ಹೋಗೋಣ ಬಾ' ಎಂದು ಕರೆಯುತ್ತಿದ್ದರು.

ತರಗತಿಯಲ್ಲಿ ಅದ್ಹೇಗೋ ಈ ವಿಷಯ ನನ್ನ ಗೆಳತಿಯರಿಗೆ ತಿಳಿಯಿತು. ಕೆಲವರು 'ನನಗೆ ಕಾಗೆ ಮುಟ್ಟಿ ನಾಲ್ಕು ತಿಂಗಳಾಯಿತು' ಎಂದರೆ, ಇನ್ನೂ ಕೆಲವರು 'ಕಾಗೆ ಏಕೆ ಮುಟ್ಟುತ್ತೆ?' ಎಂದು ಅಮಾಯಕತನವನ್ನು ತೋರ್ಪಡಿಸುತ್ತಿದ್ದರು.

ಕಾಗೆ ಮುಟ್ಟಿಸಿಕೊಂಡವರದೇ ಒಂದು ಗುಂಪಾಯಿತು; ಇದರಲ್ಲಿ ನಾನೂ ಸೇರಿದೆ. ಈ ವಿಷಯದ ಬಗ್ಗೆ ನಮಗಿದ್ದ ತಿಳುವಳಿಕೆಯನ್ನು, ಈ ಬಗ್ಗೆ ನಮ್ಮ ತಾಯಿ-ಅಕ್ಕಂದಿರು ಹೇಳಿದ್ದನ್ನು ನಾವು ಹಂಚಿ ಕೊಳ್ಳುತ್ತಿದ್ದೆವು. ಆಗ ಒಬ್ಬಳು 'ನಮ್ಮಮ್ಮನ ತಮ್ಮ ನನ್ನ ಅಕ್ಕನ ಹೊಟ್ಟೆ ಮೇಲೆ ಕುಳಿತುಕೊಂಡಿದ್ದನ್ನು ಒಂದು ಬಾರಿ ನಾನು ನೋಡಿದೆ ಕಣೇ, ಅಷ್ಟಕ್ಕೆ ಅವನು ನನಗೆ ತುಂಬಾ ಜೋರು ಮಾಡಿಬಿಟ್ಟ' ಎಂದಾಗ, ನಮಗೆಲ್ಲಾ ಅಪಾರ ಕುತೂಹಲ. ಇನ್ನೊಬ್ಬಳು ' ನಮ್ಮ ಚಿಕ್ಕಪ್ಪ ಆಗಾಗ ನಮ್ಮೊಂದಿಗೆ ಆಟ ಆಡೋದಿಕ್ಕೆ ಬರ್ತಾರೆ; ನಾನು ಅವರ ಪಕ್ಕ ಕುಳಿತಿರುವಾಗ ಎಲ್ಲೆಲ್ಲೋ ಕೈ ಆಡಿಸ್ತಾರೆ' ಎಂದು ತಲೆ ತಗ್ಗಿಸಿ ಹೇಳಿದಳು.

ನಮ್ಮ ಮನೆಯ ಚಿಕ್ಕ-ಪುಟ್ಟ ಕೆಲಸಗಳನ್ನು ಸನಗರೆ ಎಂಬ ಯುವಕ ಮಾಡಿ ಕೊಡುತ್ತಿದ್ದ. ಪಟ್ಟಣಕ್ಕೆ ಹೋಗುವಾಗ 'ನಿಮಗೇನಾದರೂ ತಂದು ಕೊಡಬೇಕೆ?' ಎಂದು ಕೇಳುತ್ತಿದ್ದ. ಅಮ್ಮ ತನಗೆ ಬೇಕಾದ ವಸ್ತುಗಳನ್ನು ಅವನಿಂದ ತರಿಸಿಕೊಳ್ಳುತ್ತಿದ್ದಳು. ಒಂದು ದಿನ ಅಮ್ಮ ನನ್ನನ್ನು 'ಪಟ್ಟಣಕ್ಕೆ ಹೋಗುವುದಿದೆಯೇ? ನಮಗೆ ಕೆಲವೊಂದು ಪದಾರ್ಥಗಳನ್ನು ತರಬೇಕಿದೆ' ಎಂದು ಹೇಳಿ ಬರಲು ಅವರ ಮನೆಗೆ ಕಳಿಸಿದಳು.

ನಾನು ಅವರ ಮನೆಗೆ ಹೋದಾಗ ಯಾರೂ ಇರಲಿಲ್ಲ. ಹೊರಗಿನಿಂದಲೇ 'ಸನಗರೆ ಮಾಮಾ' ಎಂದು ಕೂಗಿದೆ. ಯಾರೂ ಓ ಎನ್ನಲಿಲ್ಲ. ಆದರೆ ಒಳಗೆ ಯಾರೋ ಇದ್ದ ಸದ್ದಾಗುತ್ತಿತ್ತು. ನಾನು ಮತ್ತೊಮ್ಮೆ ಕೂಗಿದೆ. ಸನಗರೆ ಮಾಮಾ ಹೊರಗೆ ಬಂದ, ಅಮ್ಮ ಹೇಳಿದ್ದನ್ನು ಹೇಳಿದೆ. "ನಾನೀಗ ಹೊರಡುತ್ತಿದ್ದೇನೆ; ನೀನು ಸರಿಯಾದ ಸಮಯಕ್ಕೆ ಬಂದಿದ್ದೀಯಾ; ಎತ್ತಿನ ಗಾಡಿ ಹತ್ತು; ನಿಮ್ಮ ಮನೆಗೆ ಹೋಗೋಣ" ಎಂದ. ನಾನು ಸಹಜವಾಗಿ ಹತ್ತಿದೆ.

ಎತ್ತಿನ ಗಾಡಿ ಹೊರಟಿತು. ಸನಗರೆ ಮಾಮಾ ಕೇಳುತ್ತಿದ್ದ ಏನೇನೋ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದರೂ, ಗಾಡಿ ನಮ್ಮ ಮನೆ ಕಡೆ ಹೋಗದೆ, ಬೇರೆ ದಾರಿ ಹಿಡಿದಿದ್ದನ್ನು ಗಮನಿಸಿದೆ. 'ಸನಗರೆ ಮಾಮಾ, ಗಾಡಿ ಎಲ್ಲಿ ಹೋಗ್ತಿದೆ ನೋಡು' ಎಂದು ಎಚ್ಚರಿಸಿದರೆ, ಅವನು ಹುಸಿನಗೆ ನಗುತ್ತಾ 'ನೀನು ನನ್ನ ಜೊತೆ ಇದ್ರೆ ಸಾಕು; ಗಾಡಿ ಎಲ್ಲಿಗಾದರೂ ಹೋಗಲಿ' ಎಂದ. ಅವನ ಮಾತುಗಳು ವಿಚಿತ್ರ ಎನಿಸಿತು. 'ನೀನು ನಮ್ಮ ಮನೆ ಕಡೆ ಹೋಗದಿದ್ದರೆ ಗಾಡಿ ನಿಲ್ಲಿಸು; ನಾನು ಮನೆಗೆ ಹೋಗ್ತೀನಿ' ಎಂದೆ. ಅವನು ಗಾಡಿ ನಿಲ್ಲಿಸಲಿಲ್ಲ. ಆಗ ಓಡುವ ಗಾಡಿಯಿಂದ ಜಿಗಿದು ಹಾರಿದೆ. ಮನೆಗೆ ಓಡಿ ಹೋದೆ.

ಅಮ್ಮನಿಗೆ ವಿಷಯ ತಿಳಿಸಲಿಲ್ಲ. ಗೊತ್ತಾಗಿದ್ದರೆ, ನನ್ನನ್ನೂ, ಸನಗರೆ ಮಾಮಾನನ್ನೂ ಚಚ್ಚಿ ಹಾಕುತ್ತಿದ್ದಳೇನೊ.

ಆದರೂ ನನಗೆ ಈ ವೃತ್ತಾಂತದ ಹಿಂದಿನ ವಿಷಯ ಅರ್ಥ ವಾಗಿರಲಿಲ್ಲ. ಹುಡುಗಿಯರ ಜೊತೆ ಆಟವಾಡುತ್ತಿದ್ದಂತೆ ಹುಡುಗರ ಜೊತೆಗೂ ಆಟವಾಡುವ ಆಸೆ ಉಳಿದಿತ್ತು. ಆದರೆ ಅಮ್ಮ ಭಾರೀ ಸಿ.ಐ.ಡಿ. ಆಕೆ ಇದಕ್ಕೆ ಅವಕಾಶ ನೀಡುತ್ತಿರಲಿಲ್ಲ. ಕಣ್ಮರೆಯಾಗಿದ್ದ ಪ್ರತಿಕ್ಷಣದ ಬಗ್ಗೆ ವಿಚಾರಣೆ ನಡೆಸುತ್ತಿದ್ದಳು. 'ನೀನು ದೊಡ್ಡವಳಾಗಿದ್ದೀ, ಯಾರೇ ಹುಡುಗರಿಂದ ಅಥವಾ ಗಂಡಸರಿಂದ ಏನನ್ನೂ ತೆಗೆದುಕೊಳ್ಳಬೇಡ; ಅವರನ್ನು ಮುಟ್ಟಬೇಡ; ಅವರು ಮುಟ್ಟಲು ಅವಕಾಶ ಕೊಡಬೇಡ. ಹಾಗೇನಾದರೂ ಆದರೆ, ನಿನಗೆ ಮಕ್ಕಳು ಹುಟ್ಟುತ್ತವೆ...' ಎಂದೆಲ್ಲಾ ಭಯ ಹಿಡಿಸಿದ್ದಳು.

ಮಕ್ಕಳು ಹೇಗೆ ಹುಟ್ಟುತ್ತಾರೆ? ಎಲ್ಲಿಂದ ಹುಟ್ಟುತ್ತಾರೆ? ನಾನು ಹೇಗೆ ಹುಟ್ಟಿದೆ? ಎಲ್ಲಿಂದ ಹುಟ್ಟಿದೆ? ಎಂಬುದಾವುದೂ ತಿಳಿದಿರಲಿಲ್ಲ. ಯಾರನ್ನಾದರೂ ಕೇಳೋಣವೆಂದರೆ ಭಯ, ಸಂಕೋಚ ಅಡ್ಡಿ ಯಾಗಿದ್ದವು. ಕರ್ಣ, ಬ್ರಹ್ಮ, ಆಂಜನೇಯ, ಮೊದಲಾದವರು ಹೇಗೆ ಹುಟ್ಟಿದರು ಎಂಬುದನ್ನು ಅಮ್ಮ ಹೇಳಿದ್ದರಿಂದ ನಾನು ಕಿವಿ, ಪಾದ, ಬೆವರು ಮುಂತಾದವುಗಳಿಂದ ಮಕ್ಕಳು ಹುಟ್ಟುತ್ತಾರೆಂದು ತಿಳಿದಿದ್ದೆ. ನಂತರ ಫಿಜಿಯಾಲಜಿ ಮತ್ತು ಸ್ವಚ್ಛತೆ ಬಗ್ಗೆ ತರಗತಿಯಲ್ಲಿ ಪಾಠ ಮಾಡಿ ಹೇಳಿದಾಗ, ಜನನ ರೀತಿ ಅರ್ಥವಾಯಿತು. ನಂತರ ಯಾವುದೇ ಹುಡುಗರ ಜೊತೆ ಮಾತನಾಡಲು ಸಂಕೋಚವಾಗತೊಡಗಿತು.

ಬಾಡಿಗೆಗಿದ್ದ ಮುಸ್ಲಿಮರ ಕುಟುಂಬ ಖಾಲಿ ಮಾಡಿ ಹೋದ ಮೇಲೆ ವಾಸಂತಿ ಮತ್ತು ಖೇಡಸ್ಕರ್ ಎಂಬ ಪತಿ-ಪತ್ನಿ ಕುಟುಂಬ ಅಲ್ಲಿಗೆ ಬಂತು. ಅವರಿಗೆ ಅಣ್ಣ-ಅತ್ತಿಗೆ ಎನ್ನುತ್ತಿದ್ದೆವು. ಒಂದು ದಿನ ಶಾಲೆಯಿಂದ ಹಿಂದಿರುಗಿ ಬರುವ ಹೊತ್ತಿಗೆ ವಾಸಂತಿ ಅತ್ತಿಗೆ ಮನೆಯಲ್ಲಿ ಅಪರಿಚಿತ ಯುವಕನೊಬ್ಬ ಕುಳಿತಿರುವುದು ಕಂಡಿತು. ಯಾರು ಎಂದು ದಿಟ್ಟಿಸಿ ನೋಡುತ್ತಿರುವಾಗ, ಆ ಯುವಕನೂ ನನ್ನನ್ನೇ ನೋಡುತ್ತಿದ್ದ. ನಾಲ್ಕು ಕಣ್ಣುಗಳೂ ಬೆರೆತ ಹಾಗಾಯಿತು. ಕಸಿವಿಸಿ ಎನಿಸಿ, ಮನೆಯೊಳಗೆ ಓಡಿ ಹೋದೆ. ಕಪ್ಪು ಕೂದಲಿನ, ಕಂದು ಬಣ್ಣದ ಆ ಯುವಕ ಯಾರಿರಬಹುದು ಎಂದು ಯೋಚಿಸುತ್ತ ಬಟ್ಟೆ ಬದಲಾಯಿಸಿದೆ; ಮುಖ ತೊಳೆದುಕೊಂಡು ಆ ಬಗ್ಗೆ ಅಮ್ಮನನ್ನು ಕೇಳೋಣವೆ ಎಂದುಕೊಳ್ಳು ವಷ್ಟರಲ್ಲಿ ಅಮ್ಮ "ವಾಸಂತಿ ಅತ್ತಿಗೆಯ ಮನೆಗೆ ಆಕೆಯ ಗಂಡನ ಗೆಳೆಯ ಬಂದಿದ್ದಾನೆ; ಅವನಿಗೆ ಚಾ ಕೊಟ್ಟು ಬಾ' ಎಂದು ಹೇಳುತ್ತ ಬಟ್ಟಲನ್ನು ನನ್ನ ಕೈಗೆ ಇಟ್ಟಳು. ನಾನು ಸಂಕೋಚದಿಂದಲೇ ಹೋದೆ. ವಾಸಂತಿ ಅತ್ತಿಗೆಯೂ ಇದ್ದಳು. ನಾನು ಹೋಗುತ್ತಲೇ, ವಾಸಂತಿ ಅತ್ತಿಗೆ 'ಇವಳು ನಮ್ಮ ಮನೆ ಮಾಲೀಕರ ಮಗಳು' ಎಂದು ಪರಿಚಯ ಮಾಡಿಕೊಟ್ಟಳು. ಕೂಡಲೇ ಆ ಯುವಕ 'ಗೊತ್ತು. ಖೇಡಸ್ಕರ್ ಇವಳ ಬಗ್ಗೆ ಹೇಳಿದ್ದ' ಎಂದ. ಆ ಯುವಕನ ಮಾತು ಕೇಳಿ ನನ್ನ ಸಂಕೋಚ ಹೆಚ್ಚಿತು. ಕೈ ಚಾಚಿ ಚಹಾ ಕಪ್ ನೀಡಿದೆ.

ಅದನ್ನು ಪಡೆದ ಆ ಯುವಕ 'ಎಷ್ಟನೇ ಕ್ಲಾಸ್?' ಎಂದ.

"ಎಂಟನೇ ಕ್ಲಾಸ್" ಉತ್ತರಿಸಿದೆ.

"ವೆರಿ ಗುಡ್" ಎಂದು ಆತ ಹೇಳಿದಾಗ, ನಾನು ಮನಸ್ಸಿನಲ್ಲೇ 'ಇದರಲ್ಲಿ ವೆರಿ ಗುಡ್ ಏನು ಬಂತು?' ಎಂದುಕೊಂಡೆ.

'ನೀನು ಚೆನ್ನಾಗಿ ಡ್ರಾಯಿಂಗ್ ಮಾಡ್ತೀಯಾ; ಶಾಲೆಯ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ತೀಯಾ; ಬಹುಮಾನ ಕೂಡ ತೆಗೊಳ್ತೀಯಾ... ಅಲ್ವಾ?' ಎಂದು ಕೇಳಿದ.

ಹೂಂ ಎನ್ನುತ್ತಾ, ಇದೆಲ್ಲ ಈತನಿಗೆ ತಿಳಿದಿದೆಯೆ? ಎಂದು ಆಶ್ಚರ್ಯಪಟ್ಟೆ. ಸಂತೋಷ ಆಯಿತು. ಆತ ಯಾವುದೇ ಸಂಕೋಚವಿಲ್ಲದೆ ನನ್ನೊಂದಿಗೆ ಮಾತಾಡುತ್ತಿದ್ದರೂ, ಮಾಮೂಲಾಗಿ ಆತನೊಂದಿಗೆ ಮಾತಾಡುವುದು ನನಗೆ ಸಾಧ್ಯವಾಗಲಿಲ್ಲ. ವಾಸಂತಿ ಅತ್ತಿಗೆಯನ್ನು ಅಮ್ಮ ಕರೆದಳು. ನಾನೂ ಹಿಂಬಾಲಿಸಿ ಹೋದೆ. ನನ್ನನ್ನು ಅಮ್ಮ ಕರೆದಿರಲಿಲ್ಲವಾದರೂ, ಅಲ್ಲೇ ನಿಲ್ಲಲು ಸಂಕೋಚವಾಗಿತ್ತು.

ಖೇಡಸ್ಕರ್ ಅಣ್ಣ ಮತ್ತು ಈತ ರಾಜಾಪುರದಲ್ಲಿ ಒಂದೇ ಅಂಚೆ ಕಚೇರಿಯಲ್ಲಿ ಕೆಲಸದಲ್ಲಿದ್ದರು. ಮೊದಲು ಖೇಡಸ್ಕರ್ ಅಣ್ಣನಿಗೆ ರತ್ನಾಗಿರಿಗೆ ವರ್ಗವಾಗಿತ್ತು; ನಂತರ ಈಗ ಈತನಿಗೆ ವರ್ಗವಾಗಿತ್ತು.

ಆತನೂ ಎದ್ದು ಬಂದು 'ನಾನು ಹೋಗಿ ಬರ್ತೀನಿ; ನಾಳೆ ಡ್ಯೂಟಿಗೆ ಹಾಜರ್ ಆಗುವೆ' ಎಂದು ಹೇಳಿ, ಹೊರಡಲನುವಾದ. 'ಉಳಿದು ಕೊಳ್ಳಲು, ಊಟ-ಉಪಾಹಾರಕ್ಕೆ ಏನು ಮಾಡ್ತೀರಾ?' ಎಂದು ವಾಸಂತಿ ಅತ್ತಿಗೆ ಕೇಳಿದಾಗ, 'ರತ್ನಾಗಿರಿಯಲ್ಲೇ ಹೊಸ ಗೆಳೆಯರನ್ನು ಮಾಡಿಕೊಳ್ತೀನಿ; ಊಟ-ಉಪಾಹಾರದ ಬಗ್ಗೆ ಇನ್ನೂ ಯೋಚ್ನೆ ಮಾಡಿಲ್ಲ' ಎಂದು ಹೇಳಿ ಹೊರಟ. ನನ್ನ ಕಡೆಗೂ ಒಂದು ನೋಟ ಬೀರಿದ; ಮನಸ್ಸಿನಲ್ಲಿ ಏನೋ ಒಂಥರಾ ಭಾವನೆ ಮೂಡಿತ್ತು. ಆತ ಹೊರಟು ಹೋದ ಕಡೆಗೆ ಎಷ್ಟೋ ಹೊತ್ತು ನೋಡುತ್ತಾ ಇದ್ದೆ.

ಆ ಯುವಕನ ಹೆಸರು ಹರಿಶ್ಚಂದ್ರ ಎಂದು ಅನಂತರ ತಿಳಿಯಿತು. ಆತ ಆಗೀಗ ನಮ್ಮ ಮನೆಗೆ –ಅಂದರೆ ವಾಸಂತಿ ಅತ್ತಿಗೆ ಮನೆಗೆ – ಬರುತ್ತಾ ಇದ್ದ. ನಾನು ಏನಾದರೂ ನೆಪದಿಂದ ಆತನನ್ನು ನೋಡುತ್ತಿದ್ದೆ; ಕೆಲಸದ ನೆಪದಲ್ಲಿ ಮಾತಾಡಿಸುತ್ತಿದ್ದೆ; ಆತನೂ ನನ್ನೊಂದಿಗೆ ನಾಲ್ಕು ಮಾತು ಹೆಚ್ಚೇ ಆಡುತ್ತಿದ್ದ ಎಂದೆನಿಸಿತು. ಆತ ಎಷ್ಟೋ ಕತೆ-ಪ್ರಸಂಗಗಳನ್ನು ರಸವತ್ತಾಗಿ ಹೇಳುತ್ತಿದ್ದ. ನಮ್ಮ ಮನೆಯಲ್ಲಿ ಎಲ್ಲರ ಜೊತೆಗೂ ಆಪ್ತವಾಗಿ ಬೆರೆಯುತ್ತಿದ್ದ.

ಈ ಸಮಯದಲ್ಲಿ ಚಂದ್ರಕಾಂತ ಕಾಕೋಡ್ಕರ್ ಬರೆದ ಕಾದಂಬರಿಯೊಂದು ಕೈಗೆ ಸಿಕ್ಕಿತು. ಅಲ್ಲಿ ನಾಯಕಿಯ ಮನಸ್ಸಿನಲ್ಲಿ ನಾಯಕನ ಬಗ್ಗೆ ಮೂಡುತ್ತಿದ್ದ ಭಾವನೆಗಳನ್ನು ಬಣ್ಣಿಸಿರುವುದನ್ನು ಓದಿದಾಗ ಮುಖ ಆರಕ್ತವಾಗುತ್ತಿತ್ತು, ಮೈ ಬಿಸಿಯಾಗುತ್ತಿತ್ತು.

ಹರಿಶ್ಚಂದ್ರ ಬಂದು ಹೋಗುವುದು ಮಾಡಲಾರಂಭಿಸಿದ ಮೇಲೆ, ಆತನನ್ನು ಕಂಡಾಗ ನನ್ನ ಉಸಿರು ವೇಗವಾಗುತ್ತಿತ್ತು; ಲಜ್ಜೆ ಆವರಿಸುತ್ತಿತ್ತು. ಮೈ ಬಿಸಿಯಾಗುತ್ತಿತ್ತು. ಏನಾದರೂ ಮಾತನಾಡಿಸುವ ಆಸೆಯಾಗುತ್ತಿತ್ತು. ಅಮ್ಮನ ಭಯವೂ ಇತ್ತು. ಅಮ್ಮನ ಕಣ್ಣು ತಪ್ಪಿಸಿ ಮಾತನಾಡುತ್ತಿದ್ದೆ. ಆತನೂ ಆಸೆಯಿಂದ ನನ್ನನ್ನು ಮಾತಾಡಿಸುತ್ತಿದ್ದ. ಆತನ ಮನಸ್ಸಿನಲ್ಲೂ ನನ್ನ ಬಗ್ಗೆ ಪ್ರೀತಿಯ ಭಾವನೆಯಿತ್ತು. ಇಬ್ಬರೂ ಪ್ರೇಮ ಸುಖವನ್ನು ಮಾತುಗಳ ಮೂಲಕವೇ ಅನುಭವಿಸಿದೆವು. ಹೀಗೆ ಎರಡು ವರ್ಷಗಳೇ ಉರುಳಿದವು.

ಅಮ್ಮನಿಗೆ ಇದರ ವಾಸನೆ ತೀವ್ರವಾಗಿ ತಾಕಿತು. ನನ್ನನ್ನು ಗದರುವುದು, ಆತನ ಬಗ್ಗೆ ಮಾತಾಡದಿರುವುದು, ಆತನ ಬಗ್ಗೆ ಇತರರು ಯಾರೇ ಮಾತಾಡಿದರೂ ಅವರ ಮೇಲೆ ರೇಗುವುದು ಅಮ್ಮನ ರೂಢಿಯಾಯಿತು. ಮನೆಯಲ್ಲಿ ನನ್ನಕ್ಕ ಮಂಜುಳಾಳ ಮದುವೆಗೆ ಗಂಡು ಹುಡುಕುತ್ತಿದ್ದರು. ಹುಡುಗ ಡಿಗ್ರಿ ಮಾಡಿರಲೇಬೇಕೆಂದು ಅವಳು ಹಟ ಹಿಡಿದಿದ್ದಳು. ನನಗಿನ್ನೂ ಆಗ ಹದಿನೇಳು ವರ್ಷ. ಅಲ್ಲದೆ ನನ್ನನ್ನೂ ಒಳ್ಳೇ ಕೆಲಸದಲ್ಲಿರುವ ಪದವೀಧರನಿಗೆ ಮದುವೆ ಮಾಡಿಕೊಡುವ ವಿಚಾರ ಎಲ್ಲರದಾಗಿತ್ತು. ಹೀಗಾಗಿ ನಾನು ಹರಿಶ್ಚಂದ್ರನ ಜೊತೆ ಮಾತಾಡುವುದನ್ನು ಅಮ್ಮ ಮೊದಲು ನಿಲ್ಲಿಸಿದಳು.

ಒಂದು ದಿನ ಮುಂದೆ ಕುಳ್ಳಿರಿಸಿಕೊಂಡು ಈ ಎಲ್ಲವನ್ನೂ ಅಮ್ಮ ವಿವರಿಸಿ ಹೇಳಿದ್ದಳು, ವಾಸಂತಿ ಅತ್ತಿಗೆಯನ್ನೂ ಕರೆಯಿಸಿ ಎಚ್ಚರಿಕೆ ನೀಡಿದಳು. ಆತ ನಮ್ಮ ಮನೆಗೆ ಬರುವುದೇ ಬೇಡ ಎಂದು ಸಾರಿಬಿಟ್ಟಳು. ತನ್ನ ಮದುವೆ ಇನ್ನೂ ಆಗದಿದ್ದುದಕ್ಕೋ ಏನೋ ಮಂಜುಳಾ ಅಕ್ಕ ಕೂಡ ನನ್ನನ್ನು ತೀಕ್ಷ್ಣವಾಗಿ ನೋಡುತ್ತಾ ಕುಳಿತಳು; ನನ್ನ ಸಹಾಯಕ್ಕೆ ಆಕೆ ಕಿಂಚಿತ್ತೂ ಬರಲಿಲ್ಲ.

ಆದರೂ ನನ್ನ ಮನಸ್ಸು ಅಮ್ಮನ ಬುದ್ಧಿವಾದಕ್ಕೆ ಕಿವಿಗೊಡಲಿಲ್ಲ. ಹರಿಶ್ಚಂದ್ರನೂ ಪಾಪ ಹತಾಶನಾಗಿದ್ದ. ಇಬ್ಬರ ಮನಸ್ಸುಗಳೂ ಬೆರೆತಿದ್ದವು. ಹಾಗಾಗಿ ಮನೆಯವರ ಕಣ್ಣು ತಪ್ಪಿಸಿ ಭೇಟಿಯಾಗತೊಡಗಿದೆವು. ಮುಂದಿನ ದಾರಿಯ ಬಗ್ಗೆ ವಿಚಾರ ಮಾಡುವಷ್ಟು ನಾನು ಪ್ರೌಢೆಯಾಗಿರಲಿಲ್ಲ. ಹರಿಶ್ಚಂದ್ರನಿಗೆ ಯಾವ ಕಡೆಯಿಂದಲೂ ಸಹಕಾರವಿದ್ದಂತಿಲ್ಲ.

# ಫಿರ್ಯಾದು

ಯುಗಯುಗಾಂತರದಿಂದ
ಅವಳು ಜೀವಿಸುತ್ತಿದ್ದಾಳೆ.
ಅವಳನ್ನಿಟ್ಟ ಲೋಕದಲ್ಲಿ
ಹೊರಬರಲಾರದೇ ಒದ್ದಾಡುತ್ತ
ಯಾರೂ ಇಲ್ಲದ ಏಕಾಕಿತನದಲ್ಲಿ

ಸೂರ್ಯನ ಕಣ್ಣಾವಲು
ಕಳೆದ ಕತ್ತಲಲ್ಲಿ
ಬೆಳಗು ಮೂಡುವ ಮುನ್ನ
ಕುರುಡು ಕಣ್ಣಿನ ಮುಂದೆ
ಯಾರಿಗೂ ಕಾಣದಂತೆ
ಮೋಸದಲ್ಲಿ ಬಯಲಾಗಿಸಿ
ಅವಳ ಬರಿದಾಗಿಸಿದನಾತ.
ಬಂದಾವೇ ನಕ್ಷತ್ರಗಳು ಧರೆಗಿಳಿದು?
ಎಲ್ಲಿಂದ ತಂದಾಳು ಸಾಕ್ಷಿ?

ಚಕ್ರಗಳು ಉರುಳಿ ಮಣ್ಣು
ಮಗ್ಗಲು ಬದಲಿಸಿದಾಗೆಲ್ಲಾ
ತನ್ನ ನೇಗಿಲ ಹೂಡಿ
ಉತ್ತಿದ. ಮತ್ತೆ ಮತ್ತೆ ಉತ್ತಿದ.
ತುಟಿಗಳನೆಂದೂ ಹೊಲಿದಿದ್ದ
ತನ್ನ ತುಟಿಗಳಿಂದ.
ಕುಣಿಕೆ ಕಟ್ಟಿನ ಬಿಗಿತದಲಿ
ಫಿರ್ಯಾದುಗಳ
ಅವಳಾವ ಕೋರ್ಟಿಗೆ ಒಯ್ಯಬೇಕು?

ಸುತ್ತಿಗೆ ಹಿಡಿದ
ಕೈಗಳೆಲ್ಲಾ
ಅವನವೇ....



■ *ಶ್ವೇತಾ ನರಗುಂದ*

ಮೆಟ್ರಿಕ್ ಓದುತ್ತಿದ್ದಾಗ, 'ವಿದ್ಯಾರ್ಥಿ ದಿನ' ಪ್ರಯುಕ್ತ ಏರ್ಪಡಿಸಿದ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ 'ರೈತ ಮಗಳ' ಪಾತ್ರದಲ್ಲಿ ನಾನು ಭಾಗವಹಿಸಿದೆ. ಹರಿಶ್ಚಂದ್ರನಿಗೆ ಮೊದಲೇ ಹೇಳಿದ್ದರಿಂದ ಆತನೂ ಬಂದ. ಪ್ರೋಗ್ರಾಂ ಮುಗಿದ ಮೇಲೆ ಮನೆಗೆ ಹೋಗುವ ಮುನ್ನ ಇಬ್ಬರೂ ಭೇಟಿಯಾದೆವು. ನನ್ನ ಪಾತ್ರವನ್ನು ಮನಸಾರೆ ಮೆಚ್ಚಿಕೊಂಡು ಪ್ರಶಂಸಿದ. ನನ್ನ ಹೃದಯ ತುಂಬಿ ಬಂತು. ಶಾಲೆಯ ಹತ್ತಿರವಿದ್ದ ಸರ್ಕಾರಿ ಅತಿಥಿ ಗೃಹದ ಕಾಂಪೌಂಡ್‌ನಲ್ಲಿ ಕುಳಿತೆವು. ಆಗ ರಾತ್ರಿ ೮ ಗಂಟೆಯಾಗಿತ್ತು. ನಾನು ಶಾಲೆಯ ಬಗ್ಗೆ, ಸಹಪಾಠಿಗಳ ಬಗ್ಗೆ, ಮನೆಯವರ ಬಗ್ಗೆ, ಮನಸ್ಸಿನಲ್ಲಿ ತುಂಬಿ ಬರುತ್ತಿದ್ದ ಭಾವನೆಗಳ ಬಗ್ಗೆ ಮಾತಾಡಿದೆ. ಆತನೂ ಹೀಗೇ ಎಷ್ಟೋ ವಿಷಯಗಳನ್ನು ಮನಸಾರೆ ಮಾತಾಡಿದ. ನನ್ನ ಬಗೆಗಿನ ಪ್ರೀತಿ-ಅಭಿಮಾನಗಳನ್ನು ಥರಾವರಿಯಾಗಿ ವ್ಯಕ್ತಪಡಿಸಿದ. ಅಂದಿನ ಕಾರ್ಯಕ್ರಮವನ್ನು ಬಣ್ಣಿಸಿದ.

ಹೀಗೆ ಮಾತಾಡುತ್ತಲೇ ಇದ್ದ ನಮಗೆ ಸಮಯ 10 ಗಂಟೆಯಾಗಿದ್ದೂ ಗೊತ್ತಾಗಿಲ್ಲ. ಧಿಡೀರನೆ ವಾಚ್ ನೋಡಿಕೊಂಡ ಆತ "ಓಹ್. ಹತ್ತಾಯಿತು. ಈಗ ನನಗೆ ಊಟ ಹೋಟೆಲ್‌ನಲ್ಲಿ ಕೂಡ ಸಿಗೊಲ್ಲ; ಇವತ್ತು ಉಪವಾಸವೇ ಗತಿ" ಎಂದ. ನನಗೆ ತಡೆಯದಾಯಿತು. "ಇರು, ಮನೆಗೆ ಹೋಗಿ ನಿನಗೆ ಊಟ ತರ್ತೀನಿ" ಎಂದವಳೆ, ಆತನ ಉತ್ತರಕ್ಕೂ ಕಾಯದೇ ಓಡಿದೆ.

ಮನೆ ತಲುಪಿದಾಗ ಎಲ್ಲರ ಊಟ ಮುಗಿದಿತ್ತು. ಅಡುಗೆ ಮನೆಗೆ ಹೋಗಿ ಮಿಕ್ಕಿರುವುದನ್ನು ನೋಡಿ, ಒಂದು ಟಿಫಿನ್ ಬಾಕ್ಸ್‌ನಲ್ಲಿ ಅನ್ನ-ಸಾರು ಹಾಕಿಕೊಂಡೆ. ನಾನು ಮರಳಿದ್ದು ಅಮ್ಮನಿಗೆ ತಿಳಿಯಿತು. ಊಟ ಬಡಿಸಿಕೊಂಡು ನಾನು ಊಟ ಮಾಡುತ್ತಿರುವೆ ಎಂದು ಆಕೆ ತಿಳಿದಿರಬೇಕು. ಆದರೆ ನಾನು ಟಿಫಿನ್ ಬಾಕ್ಸ್‌ನೊಂದಿಗೆ ಲಗುಬಗೆಯಿಂದ ಸಾಗಿ ಹರಿಶ್ಚಂದ್ರನಿಗೆ ನೀಡಿದೆ. ಊಟ ಮಾಡುವವರೆಗೆ ಕುಳಿತೆ. ಒಯ್ದಿದ್ದ ಚೆಂಬು-ಲೋಟದಲ್ಲಿ ನೀರು ಕೊಟ್ಟೆ. ಸಮಾಧಾನದಿಂದ ಆತ ಊಟ ಮಾಡಿದ್ದು ಕಂಡು ನಾನೂ ಸಮಾಧಾನಗೊಂಡೆ. ಮತ್ತೆ ಏನೆಲ್ಲಾ ಮಾತು, ಹರಟೆ, ನಗು.

ರಾತ್ರಿ ಎಷ್ಟೋ ಹೊತ್ತಾಗಿರಬೇಕು. ಅತ್ತ ಮನೆಯಲ್ಲಿಂದ ನಾನು ಕಾಣೆಯಾದುದು ತಿಳಿದಾಗ ಗಾಬರಿಯಾದ ಅಮ್ಮ, ಮತ್ತಿತರರು ನನ್ನನ್ನು ಹುಡುಕಲಾರಂಭಿಸಿದ್ದರು. ನಮ್ಮ ಶಾಲೆಯ ಕಡೆಗೂ ಹೋಗಿ ಬಂದರು.

ನನ್ನನ್ನು ಹುಡುಕುತ್ತಾ ಹೋದವರು ಮನೆಗೆ ಬರುವಷ್ಟರಲ್ಲಿ ನಾನು ಮನೆಗೆ ಬಂದಿದ್ದೆ. ಬಂದವಳೇ ಊಟವನ್ನೂ ಮಾಡದೇ ನನ್ನ ಹಾಸಿಗೆಯಲ್ಲಿ ಮಲಗಿ ಮುಸುಕು ಹಾಕಿಕೊಂಡೆ. ಹೊರಗೆ ಅಮ್ಮ ಮತ್ತಿತರರು ಬಂದುದು ಗೊತ್ತಾದರೂ ಮುಸುಕು ತೆಗೆಯಲಿಲ್ಲ. ಅಮ್ಮ ತುಂಬಾ ಕಾತುರದಿಂದ 'ಏಯ್ ಮಗಳೆ, ಎಲ್ಲಿಗೆ ಹೋಗಿದ್ದಿ? ಏನಾಯಿತು?.......' ಎಂದೆಲ್ಲಾ ಕೇಳಿದಳು. ನಾನು ಮಾತ್ರ ಮುಸುಕು ತೆಗೆಯಲೇ ಇಲ್ಲ. ಆಗ ಅಮ್ಮನೇ, 'ಮಗುಗೆ ದೃಷ್ಟಿಯಾಗಿದೆ. ಶಾಲೆಯಿಂದ ಮನೆಗೆ ಒಬ್ಬಳೇ ಬಂದಿದ್ದಾಳೆ; ಅಲ್ಲಿ ಭೂತದ ಕಾಟ ಜಾಸ್ತಿ. ಬೆಳಿಗ್ಗೆ ದೃಷ್ಟಿ ತೆಗೆಯಬೇಕು ... ...' ಎಂದಿತ್ಯಾದಿ ಹೇಳಿ, ಎಷ್ಟೋ ಹೊತ್ತು ನನ್ನ ಹಾಸಿಗೆಯಲ್ಲೇ ಕುಳಿತಿದ್ದಳು. ಮಾತೃ ಹೃದಯದ ಕಳವಳ ನನಗರ್ಥವಾಗಿತ್ತು; ಇಂಥ ತಾಯಿಯ ಕಣ್ಣು ತಪ್ಪಿಸಿ ಹರಿಶ್ಚಂದ್ರನನ್ನು ಭೇಟಿಯಾಗುವುದನ್ನು ಮುಂದುವರೆಸಿದ್ದು ನನ್ನಲ್ಲಿ ಆ ಹೊತ್ತಿನಲ್ಲಿ ಅಪರಾಧಿ ಭಾವನೆಯನ್ನು ಮೂಡಿಸಿತು.

ಅಕ್ಕ ಮಂಜುಳಾ ಬಹಳ ಕಾಲದಿಂದ ಬ್ರಾಹ್ಮಣ ಗೆಳತಿಯರ ಸಹವಾಸದಲ್ಲಿದ್ದಳು. ಹಾಗಾಗಿ ಅವಳ ರೀತಿ-ನೀತಿಗಳು ಬದಲಾಗಿದ್ದವು. ಮಾತಾಡುವುದೂ ನಾಜೂಕಾಗಿತ್ತು. ತಾನು ಪದವೀಧರೆಯಾದ್ದರಿಂದ ತನ್ನನ್ನು ಮದುವೆಯಾಗುವವ ಆಫೀಸರ್, ಜಡ್ಜ್ ಆಗಿರಬೇಕು ಎಂಬ ಬಯಕೆ ಅವಳದು. ನಮ್ಮ ಮನೆಗೆ ಟಾಯ್ಲೆಟ್ ಬಂದಿದ್ದೇ ಅವಳ ಒತ್ತಾಯದಿಂದ. ಅಲ್ಲಿವರೆಗೆ ನಾವೆಲ್ಲರೂ ಮನೆ ಹಿಂದಿನ ಹಿತ್ತಲಲ್ಲಿ, ಗಿಡ-ಗಂಟೆಗಳ ಮರೆಯಲ್ಲಿ ಶೌಚ ಬಾಧೆಯನ್ನು ತೀರಿಸಿಕೊಳ್ಳುತ್ತಿದ್ದೆವು. ಅಕ್ಕ ಒತ್ತಾಯ ಮಾಡಿದ್ದರಿಂದ ನಮಗೆ ಟಾಯ್ಲೆಟ್ ಸಿಕ್ಕಿತು.

ರತ್ನಾಗಿರಿಯಲ್ಲಿ ಅಕ್ಕನಿಗೆ ಹುಡುಗ ಸಿಗುವುದು ದುಸ್ತರವೆನಿಸಿದಾಗ, ಅವಳನ್ನು ಅಮ್ಮ, ಅಣ್ಣ ಶಾಹು ಬಳಿಗೆ ಮುಂಬಯಿಗೆ ಕಳಿಸಿದ್ದರು. ಅಲ್ಲಿ ಕೆಲ ತಿಂಗಳಲ್ಲಿ ಒಳ್ಳೆ ಹುಡುಗ ಸಿಕ್ಕ. ಹುಡುಗನ ಕಡೆಯವರು ಅಣ್ಣನ ಮನೆಗೆ ಬಂದು ಹುಡುಗಿಯನ್ನು ನೋಡಿದರು; ಊರಿನ ವಿಷಯ ವಿಚಾರಿಸಿದರು. ನಂತರ ಬೌದ್ಧಜನ ಪಂಚಾಯಿತಿಯ ಸದಸ್ಯತ್ವ ಆಗಿದೆಯೆ ಎಂದು ಕೇಳಿದರು. ಇದೆಲ್ಲಾ ಮುಗಿದ ಬಳಿಕ ಅವರನ್ನು ಊರಿಗೆ ಕರೆತರುವುದಾಯಿತು. ಅಲ್ಲಿ ಮತ್ತೆ ಮಾತುಕತೆ. ಕೊಡುವುದು-ತಗೊಳ್ಳುವುದು ನಿರ್ಧಾರವಾಯಿತು. ಬೌದ್ಧ ಸಂಪ್ರದಾಯದ ಮದುವೆಗೆ ಅಗತ್ಯವಾದ ಬಟ್ಟೆ ಮತ್ತಿತರ ವಸ್ತುಗಳ ಖರೀದಿಯಾಯಿತು.

ಬ್ಯಾಂಡ್ ಕರೆಸಿ ಮದುವೆ ಮಾಡಿದ ಮೊದಲನೇ ಉದಾಹರಣೆ ಈ ಮದುವೆ. ನವ ಬೌದ್ಧರ ಮದುವೆಯಲ್ಲಿ ಅದುವರೆಗೆ ಎಲ್ಲೂ ಆಹ್ವಾನಿತರಿಗೆ ಐಸ್‌ಕ್ರೀಂ ಕೊಟ್ಟಿರಲಿಲ್ಲ. ಮಂಜುಳಾ ಅಕ್ಕನ ಮದುವೆಯಲ್ಲಿ ಇದೂ ಆಯಿತು. ಇಡೀ ಮದುವೆ ನಮ್ಮ ಮಟ್ಟಿಗೆ ಅದ್ದೂರಿಯಗಿ ನಡೆಯಿತು.

ಮದುವೆಯಾದ ಬಳಿಕ ಅಕ್ಕ ತನ್ನ ಎಲ್ಲಾ ಹೊಸ ಕನಸುಗಳನ್ನು ಕೈ ಬಿಡಬೇಕಾಯಿತು. ಆಕೆಯ ಗಂಡ, ಅತ್ತೆ, ಮಾವ, ನಾದಿನಿ, ಮೈದುನರೆಲ್ಲಾ ಹಳ್ಳಿಗಾಡಿನ ರೀತಿಯವರು; ಅಕ್ಕ ಕಲಿತಿದ್ದ ಬ್ರಾಹ್ಮಣವಾದಿ ರೀತಿ-ನೀತಿಗೆ ಅಪರಿಚಿತರು. ತಾನು ವಿದ್ಯಾವಂತೆ, ಗಂಡ ವಿದ್ಯಾವಂತ. ತಮ್ಮದು ಬೇರೆ ಸಂಸಾರ ಇರಬೇಕು. ಅತ್ತೆ-ಮಾವ, ನಾದಿನಿ-ಮೈದುನರು ಆಗಾಗ ಬಂದು ಹೋಗಬೇಕು; ಸಂಜೆ ಗಂಡನ ಜೊತೆ ವಾಕಿಂಗ್ ಹೋಗಬೇಕು; ಗಂಡ ಆಫೀಸಿಗೆ ಹೋದ ಮೇಲೆ ತಾನು ಓದು-ಬರಹ ಮಾಡಬೇಕು; ಸಂಘ-ಕ್ಲಬ್‌ಗಳಿಗೆ ಹೋಗಬೇಕು...... ಮುಂತಾದ ಯೋಚನೆ ಹುಸಿ ಹೋಯಿತು. ಬ್ರಾಹ್ಮಣರ ಥರ ಬನ್ನಿ, ಹೋಗಿ ಎಂದು ಆಕೆ ಮಾತಾಡಿದ್ದನ್ನೂ ಆಕೆಯ ಗಂಡನ ಮನೆಯವರು 'ಈಕೆಯ ಬುದ್ಧಿ ಸರಿಯಿಲ್ಲ' ಎಂದು ಅರ್ಥ ಮಾಡಿಕೊಳ್ಳುವ ಹಾಗಾಯಿತು.

ನಾನು ನಾಲ್ಕಾರು ಬಾರಿ ಅಕ್ಕನ ಮನೆಗೆ ಹೋದಾಗ ಇದೆಲ್ಲವನ್ನೂ ಗಮನಿಸಿದೆ. ಇಷ್ಟಲ್ಲದೆ ಆಕೆಗೆ ಬೇರೆ ಯಾವುದೇ ರೀತಿಯ ಕಷ್ಟದ ಪರಿಸ್ಥಿತಿ ಇರಲಿಲ್ಲ.

ಅಪ್ಪ ತೀರಿಕೊಂಡ ನಂತರ ಮನೆಯ ಎಲ್ಲಾ ಜವಾಬ್ದಾರಿಯನ್ನು ಅಮ್ಮ ವಹಿಸಿಕೊಂಡಳಷ್ಟೆ. ಈ ಕಾರಣದಿಂದಲೋ ಏನೊ, ಮನೆಯಲ್ಲಷ್ಟೇ ಅಮ್ಮ ಯಜಮಾನಿಯಾಗದೆ ನಮ್ಮ ಕಾಲೊನಿಗೇ ಮುಂದಾಳುವಾದಳು. ಅಪ್ಪನಿಗೆ ನಮ್ಮ ಜಾತಿಯಲ್ಲಿ ಗಣ್ಯ ಸ್ಥಾನವಿತ್ತಲ್ಲ! ಯಾರದೇ ಮನೆಯಲ್ಲಿ ಜಗಳವಾದರೂ ನ್ಯಾಯ ಹೇಳಲು ಅಮ್ಮನನ್ನು ಕರೆಯುತ್ತಿದ್ದರು. ಗಂಡ-ಹೆಂಡತಿ ಜಗಳವಿರಲಿ, ತಾಯಿ-ಮಗನ ಜಗಳವಿರಲಿ; ಆಸ್ತಿ ಭಾಗದ ಜಗಳವಿರಲಿ, ಹುಡುಗ ಹುಡುಗಿಯನ್ನು ಚುಡಾಯಿಸಿರಲಿ, ಎಲ್ಲಾ ದೂರುಗಳು ಅಮ್ಮನ ಹತ್ತಿರ ಬರುತ್ತಿದ್ದವು. ಈ ಪ್ರಕರಣಗಳನ್ನು ವಿಚಾರಣೆ ಮಾಡುವಾಗ ಮತ್ತು ತೀರ್ಮಾನ-ಶಿಕ್ಷೆ ಕೊಡುವಾಗ ಅಮ್ಮ ತುಂಬಾ ಕಠೋರಳಾಗಿರುತ್ತಿದ್ದಳು. ಹೆಂಡತಿಗೆ ಗಂಡ ಹೊಡೆದ, ಗಂಡ ಅಕ್ರಮ ಸಂಬಂಧ ಹೊಂದಿದ ಪ್ರಕರಣಗಳಲ್ಲಂತೂ ಅಮ್ಮ ರೌದ್ರಾವತಾರ ತಾಳಿಬಿಡುತ್ತಿದ್ದಳು; ಆಗ ಅಂಥ ಗಂಡನ ಪಾಡು ಯಾರಿಗೂ ಬೇಡ ಎನ್ನುವಂತಾಗುತ್ತಿತ್ತು.

ಒಮ್ಮೆ ನಮ್ಮ ಕಾಲೊನಿಯ ವಿಧವೆ ಹೆಂಗಸೊಬ್ಬಳು ಗರ್ಭಿಣಿಯಾದ ಪ್ರಕರಣ ಅಮ್ಮನವರೆಗೆ ಬಂತು. ದೂರು ತಂದವರು ಆ ವಿಧವೆಯ ಸಂಬಂಧಿಕರೂ ಅಲ್ಲ. ಇಂಥ ಪ್ರಕರಣಗಳಿಂದ ಕಾಲೊನಿ ಮರ್ಯಾದೆ ಹರಾಜಾಗುತ್ತೆ; ಆದ್ದರಿಂದ ಆ ವಿಧವೆಗೆ ಕಠಿಣ ಶಿಕ್ಷೆ ಕೊಡಬೇಕು;

ಅಂದರೆ ಆಕೆಗೆ ಸಾಮಾಜಿಕ ಬಹಿಷ್ಕಾರ ಹಾಕಿ, ಕಾಲೊನಿಯಿಂದ ಹೊರಕ್ಕೆ ತಳ್ಳಬೇಕು ಎಂದು ದೂರು ತಂದ ಹೆಂಗಸು ಅಮ್ಮನ ಬಳಿ ವಾದಿಸಿದಳು.

ಆಕೆಯನ್ನು ತೀಕ್ಷ್ಣವಾಗಿ ನೋಡಿದ ಅಮ್ಮ, 'ಕಾಲೊನಿಯ ಮರ್ಯಾದೆಯ ಚಿಂತೆ ನಿನಗೇ ಜಾಸ್ತಿ ಇರುವಂತಿದೆಯಲ್ಲ? ಆ ವಿಧವೆ ಗರ್ಭಿಣಿಯಾದದ್ದು ಯಾರಿಂದ? ಅದು ಮೊದಲು ಗೊತ್ತಾಗಬೇಕು' ಎಂದಳು. ಆಗ ಆ ಹೆಂಗಸು ಗಾಬರಿಯಾಗಿ 'ಅದೆಲ್ಲಾ ಏಕೆ? ಈ ವಿಧವೆಗೆ ಶಿಕ್ಷೆ ಕೊಡಬೇಕು' ಎಂದು ಒತ್ತಾಯಿಸಿದಳು.

ಅಮ್ಮ ವಿವರಗಳನ್ನು ಕೇಳುತ್ತಾ ಹೋದಂತೆ ಈ ಹೆಂಗಸಿನ ಮುಖ ಬಿಳಿಚಿಕ್ಕುತ್ತಾ ಬಂತು. ಆ ವಿಧವೆ ಗರ್ಭಿಣಿಯಾಗಲು ಈ ಹೆಂಗಸಿನ ಗಂಡನೇ ಕಾರಣ ಎಂಬುದು ಬಯಲಾಯಿತು. ಆಗ ಅಮ್ಮ ಆ ವಿಧವೆಯ ಪರವಾದ ನಿಲುವು ತಾಳಿದಳು. 'ವಯಸ್ಸಿನ ಆಸೆಯಿಂದ ಎಚ್ಚರ ತಪ್ಪಿದ್ದು ವಿಧವೆಯ ತಪ್ಪಾದರೂ, ಆಕೆ ಗರ್ಭಿಣಿಯಾಗಲು ಒಬ್ಬ ಗಂಡಸೂ ಕಾರಣನಾಗಿದ್ದರಿಂದ ಪ್ರಕರಣಕ್ಕೆ ಅವನೂ ಜವಾಬ್ದಾರ' ಎಂದು ತೀರ್ಪು ನೀಡಿ, ವಿಧವೆಗೆ ಅವಕಾಶ ಒದಗಿಸಿದಳು. ಮುಂದೆ ಈ ವಿಧವೆ ಮತ್ತು ಆ ಗಂಡಸಿಗೆ ಮದುವೆಯನ್ನೂ ಮಾಡಿ, ಮಗು ಹೆರಿಗೆ ಮಾಡಿಸಿದ ದಿಟ್ಟೆ ನನ್ನ ಅಮ್ಮ.

'ಆಯ' ನಮ್ಮ ಮನೆತನದ ವೃತ್ತಿ. ವರ್ಷವಿಡೀ ಬಿಟ್ಟಿ ಚಾಕರಿ ಮಾಡಿ, ಸುಗ್ಗಿಯ ಕಾಲದಲ್ಲಿ ರಾಶಿ ಮಾಡುವ ಕಣಗಳಿಗೆ ಹೋಗಿ ದವಸ-ಧಾನ್ಯವನ್ನು ಪಡೆದುಕೊಂಡು ತರುವುದೇ 'ಆಯ'. ಈ ವೃತ್ತಿಯನ್ನು ಸಾಮಾನ್ಯವಾಗಿ ಮಹಾರರು ಮಾಡುತ್ತಾರೆ; ಕೊಂಕಣ ಭಾಗದಲ್ಲಿ ಕೆಲವೆಡೆ ಬುರೂಡ್ ಹೆಸರಿನ ಅಲೆಮಾರಿ ಜನಾಂಗವೂ ಈ ವೃತ್ತಿಯನ್ನು ತಲೆಮಾರುಗಳಿಂದ ಅವಲಂಬಿಸಿದೆ.

ನಾವು ಚಮ್ಮಾರ್ ಜಾತಿಯವರು. ಅದು ಹೇಗೋ ಈ ವೃತ್ತಿ ನಮ್ಮ ಮನೆತನಕ್ಕೆ ಎಷ್ಟೋ ತಲೆಮಾರುಗಳಿಂದ ಬಂದಿತ್ತು. ನಮ್ಮ ಮನೆತನದ ಹೆಸರು 'ಪೋವಾರ್' ಎಂಬುದು. ಆದರೆ ಅಪ್ಪ ಈ ಹೆಸರನ್ನು ತುಸು ಮಾರ್ಪಡಿಸಿ 'ಪವಾರ್' ಎಂದು ಮಾಡಿಕೊಂಡ; ನಂತರ ಅದು ಹಾಗೇ ಮುಂದುವರೆದು ಬಂತು.

ಒಂಬತ್ತನೇ ತರಗತಿಯಲ್ಲಿ ಮರಾಠಿ ವಿಷಯವನ್ನು ವಸಂತರಾವ್ ದೇಶಪಾಂಡೆ ಮಾಡುತ್ತಿದ್ದರು. ಭಾಷೆಯ ಬಗ್ಗೆ ಆಸಕ್ತಿ ಮತ್ತು ಜ್ಞಾನ ಇದ್ದ ಈ ಶಿಕ್ಷಕರಿಂದಾಗಿ ನನಗೆ ಸಾಹಿತ್ಯದಲ್ಲಿ ಅಭಿರುಚಿ ಮೂಡಿತು. ಇವರು ಕೊಟ್ಟ ಹತ್ತಾರು ಪುಸ್ತಕಗಳನ್ನು ಓದಿದೆ; ತಿಳಿಯದುದನ್ನು ಹೇಳಿಸಿಕೊಂಡೆ. ಸಮಕಾಲೀನ ನಾಟಕಗಳನ್ನೂ ಕೇಳಿ ಪಡೆದು, ಓದಿದೆ, 'ಅಳುವ ರಾಜಕುಮಾರಿ' ಎಂಬ ನಾಟಕವನ್ನು ಕಾರ್ಯಕ್ರಮದಲ್ಲಿ ಪ್ರದರ್ಶಿಸಿದಾಗ, ನಾನು ರಾಜನ ಪಾತ್ರದಲ್ಲಿ ಮಿಂಚಿದ್ದೆ.

ಅದೇ ವರ್ಷ ಹರಿಶ್ಚಂದ್ರ ತನ್ನ ಕಚೇರಿಯಲ್ಲಿ ವಿಪರೀತ ಜಾತೀಯತೆ ತುಂಬಿದೆ ಎಂದು ವ್ಯಥೆಯಿಂದ ಹೇಳಿದ. ಟೂರ್ ಹೋದಾಗ ತಾನು ಪ್ರತ್ಯೇಕವಾಗಿ ಊಟ ಮಾಡಬೇಕಾಗುತ್ತದೆ ಎಂದು ಕುಗ್ಗಿದ ದನಿಯಲ್ಲಿ ತಿಳಿಸಿದ. ನನಗೂ ಕರುಳು ಕಿತ್ತು ಬಂತು.

ಇಂಥ ಕಹಿ ಅನುಭವಗಳು ಹೆಚ್ಚಾದಾಗ ಕೆಲಸವನ್ನೇ ಬಿಡುವ ನಿರ್ಧಾರ ಮಾಡಿದ. ಈ ನಿರ್ಧಾರದ ಬಳಿಕ, ಎದುರಾದ ಎಲ್ಲಾ ಅವಮಾನದ ಸಂದರ್ಭಗಳಲ್ಲಿ ಬ್ರಾಹ್ಮಣರನ್ನು, ಮರಾಠಾರನ್ನು, ಕುಣಬಿಗಳನ್ನು ದಬಾಯಿಸುತ್ತಾ ಬಂದ. ಅಧಿಕಾರಿಗಳಿಗೂ ಸವಾಲು ಹಾಕಿದ, 'ನಾಯಿ, ಹಸುಗಳನ್ನು ಭಕ್ತಿಯಿಂದ ಕಾಣುವ ನೀವು ಮನುಷ್ಯರನ್ನೇ ದೂರ ಇಡುವ ನೀಚರು' ಎಂದು ಬೆಂಕಿಯಂಥ ಮಾತುಗಳನ್ನು ಆಡಿದ. ಕಡೆಗೆ ಕೆಲಸಕ್ಕೆ ರಾಜಿನಾಮೆ ನೀಡಿ ಹೊರಬಿದ್ದ. ಆಗ ಭೇಟಿಯಾದಾಗ, 'ಇದನ್ನೆಲ್ಲಾ ನೋಡಿಯೇ ಬಾಬಾಸಾಹೇಬರು ಹಳ್ಳಿಗಳನ್ನು ಬಿಟ್ಟು ನಗರಗಳಿಗೆ ವಲಸೆ ಹೋಗಲು ಹೇಳಿದ್ದಾರೆ' ಎಂದು ಹೇಳಿದ.

ಹರಿಶ್ಚಂದ್ರ ಹುಟ್ಟಿದ ವರ್ಷ ಬಾಬಾಸಾಹೇಬ್ ಅಂಬೇಡ್ಕರ್ ಕೊಂಕಣ ಪ್ರವಾಸ ಕೈಗೊಂಡು ಪ್ರಚಾರ ಮಾಡಿದ್ದರು. ಕಣಕವಲಿ ಭಾಗದಲ್ಲಿ ಕಳಸೂಳಕರ್, ಅರುಳೇಕರ್, ಕಿರ್ಲೋಸ್ಕರ್, ಹಡಕರ್, ಹಿಂದಳೇಕರ್ ಮುಂತಾದವರು ಬಾಬಾಸಾಹೇಬರಿಗೆ ಸಹಕಾರ ನೀಡಿದ್ದರು. ಬಿಟ್ಟಿ ಚಾಕರಿ ಬಿಟ್ಟು ಬಿಡಲು ಅವರು ಕರೆ ನೀಡಿದ ಪ್ರಕಾರ, ಹರಿಶ್ಚಂದ್ರನ ಅಪ್ಪ ಕೂಡಾ ಬಿಟ್ಟಿ ಚಾಕರಿ ಬಿಟ್ಟರಂತೆ. ಈ ಹಿನ್ನೆಲೆ ಇದ್ದುದರಿಂದಲೇ ಹರಿಶ್ಚಂದ್ರ ತುಂಬ ಸ್ವಾಭಿಮಾನಿಯಾಗಿದ್ದ.

ಕೆಲವು ತಿಂಗಳಲ್ಲೇ ಹರಿಶ್ಚಂದ್ರನಿಗೆ ಅಂಚೆ ಇಲಾಖೆಯಲ್ಲಿ ಕೆಲಸ ಸಿಕ್ಕಿತು. ತುಸು ಓದಿದರೂ ಕೆಲಸ ಸಿಗುವುದು ಆಗ ಸುಲಭವಿತ್ತು. ರತ್ನಾಗಿರಿಯಲ್ಲೇ ಪೋಸ್ಟಿಂಗ್ ಆಗಿ, ಹರಿಶ್ಚಂದ್ರ ಕೆಲಸಕ್ಕೆ ಹಾಜರಾದ.

ನಾನು ಅಭ್ಯಾಸದ ಕಡೆ ಗಮನ ಹರಿಸಿದೆ. ನನಗೆ ಗಣಿತ ಕಠಿಣವಾದ ವಿಷಯವಾಗಿತ್ತು. ಇಂಗ್ಲಿಷ್ ಬಗ್ಗೆ ತುಸು ತಿರಸ್ಕಾರವಿತ್ತು. ಹಾಗಾಗಿ, ಈ ಎರಡು ವಿಷಯಗಳು ನನಗೆ ಕಡೇವರೆಗೂ ಕಠಿಣವಾಗಿ ಉಳಿದವು. ಹರಸಾಹಸ ಮಾಡಿ ಮೆಟ್ರಿಕ್ ಮುಗಿಸಿದೆ.

ರಜೆಯಲ್ಲಿ ತಿಂದುಂಡು ಓಡಾಡಿಕೊಂಡಿರುವುದು; ರಿಜಲ್ಟ್ ಬಂದ ಬಳಿಕ ಎಲ್ಲಾದರೂ ಕೆಲಸ ಹುಡುಕುವುದು ನನ್ನ ಗುರಿಯಾಯಿತು.

ಈ ರಜೆಯಲ್ಲೇ ವಾಸಂತಿ ಅತ್ತಿಗೆ ಮನೆಗೆ ಆಕೆಯ ತಮ್ಮ ಬಂದ. ಕೊಲ್ಲಾಪುರದ ಯಾವುದೋ ಥಿಯೇಟರ್‌ನಲ್ಲಿ ಆತ ಡೋರ್‌ಕೀಪರ್ ಆಗಿದ್ದನಂತೆ. ಒಳ್ಳೇ ಮಾತುಗಾರ. ಅಮ್ಮನ ಮನಸ್ಸನ್ನೂ ಗೆದ್ದ. ಹಾಗಾಗಿ ನಮ್ಮ ಮನೆಯಲ್ಲೂ ಹೆಚ್ಚಿನ ಸಮಯ ಕಳೆಯತೊಡಗಿದ. ಯಾವುದೇ ಸಂಕೋಚವಿಲ್ಲದೆ ನನ್ನನ್ನೂ ಮಾತಾಡಿಸುತ್ತಿದ್ದ. ಆತನ ಬಗ್ಗೆ ನನಗೆ 'ಆ ತರಹದ' ಭಾವನೆಯಿಲ್ಲದ್ದರಿಂದ, ನಾನು ಅತಿ ಸಹಜವಾಗಿ ಮಾತಾಡುತ್ತಿದ್ದೆ.

ಕೆಲವು ದಿನಗಳ ನಂತರ ವಾಸಂತಿ ಅತ್ತಿಗೆ 'ನನ್ನ ತಮ್ಮ ರಾಮನಾಥ ನಿನಗೆ ಹೇಗೆ ಅನಿಸಿದ?' ಎಂದು ಕೇಳಿದಾಗ, ನನಗೆ ಒಂದೂ ತೋಚಲಿಲ್ಲ.

'ಹೇಗೆ ಅನಿಸಿದ ಅಂದರೆ?' ನಾನು ಪ್ರಶ್ನಾರ್ಥಕವಾಗಿ ಮರುಪ್ರಶ್ನೆ ಹಾಕಿದೆ.

'ನೀನು ಅವನಿಗೆ ಇಷ್ಟವಾಗಿದ್ದೀಯಂತೆ; ನಿನಗೂ ಇಷ್ಟವಾದರೆ ಮದುವೆಯ ಮಾತು ಆಡಬಹುದು ಎನ್ನುತ್ತಾನೆ'.

ನನಗೆ ವಾಸಂತಿ ಅತ್ತಿಗೆಯ ಬಗ್ಗೆಯೇ ಬೇಸರವಾಯಿತು. ಇವರ ಮನೆಗೆ ನಾಲ್ಕು ವರ್ಷಗಳ ಹಿಂದೆ ಬಂದಿದ್ದ ಇವರ ಗಂಡನ ಮಿತ್ರ ಹರಿಶ್ಚಂದ್ರನಿಗೆ ನಾನು ಮಾರು ಹೋಗಿದ್ದು, ಅಮ್ಮನಿಂದ ಬೈಸಿಕೊಂಡಿದ್ದು ಎಲ್ಲವೂ ಇವರಿಗೆ ಗೊತ್ತು. ಆದರೂ ಇವರು ಹೀಗೆ ಕೇಳುತ್ತಿದ್ದಾರಲ್ಲ ಎಂದು ವ್ಯಥೆ ಪಟ್ಟೆ.

'ಹರಿಶ್ಚಂದ್ರನ ಬಗ್ಗೆ ರಾಮನಾಥ್‌ಗೆ ಹೇಳಲಿಲ್ಲವೆ?' ಎಂದು ವಿಚಾರಿಸಿದೆ.

'ಹೇಳಿದೆ, ಅದೇನೂ ಪರ್ವಾಗಿಲ್ಲ. ಅವಳು ಒಪ್ಪಿದರೆ ಸಾಕು ಎನ್ನುತ್ತಾನೆ.' ವಾಸಂತಿ ಅತ್ತಿಗೆಯ ದನಿಯಲ್ಲಿ ಕೋರಿಕೆಯೂ ಸೇರಿದಂತಿತ್ತು.

ನನ್ನ ಹೃದಯ ವಿಹ್ವಲಗೊಂಡಿತು. ಹರಿಶ್ಚಂದ್ರನ ಹೊರತಾಗಿ ಯಾರಿಗಾದರೂ ನಾನು ನನ್ನನ್ನು ಒಪ್ಪಿಸಿಕೊಳ್ಳುವ ಯೋಚನೆಯನ್ನೂ ಮಾಡುವ ಮನಸ್ಸಿರಲಿಲ್ಲ. ಈಗ ಯಾಕೋ ಮನೆಯವರೆಲ್ಲರೂ ರಾಮನಾಥನ ಪರವಾಗಿದ್ದಂತೆ ಕಾಣುತ್ತಿತ್ತು.

ರಾಮನಾಥನ ಬಗ್ಗೆ ನಾನು ಒಪ್ಪಿಗೆಯನ್ನು ಕೊಡಲಿಲ್ಲ. ಆದರೂ ಮನೆಯಲ್ಲಿ ಅವನ ವಿಷಯ ಮತ್ತೆ ಮತ್ತೆ ಪ್ರಸ್ತಾಪವಾಗುತ್ತಿತ್ತು. ಹರಿಶ್ಚಂದ್ರ ಯಾರಿಗೂ ಬೇಕಿರಲಿಲ್ಲ. ನನ್ನ ಹೃದಯ-ಮನಸ್ಸುಗಳಲ್ಲಿ ಮಾತ್ರ ಹರಿಶ್ಚಂದ್ರನೇ ತುಂಬಿಕೊಂಡಿದ್ದ.

(ಮುಂದುವರಿಯುವುದು)

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ–ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು – 560 018